

**ಕರ್ನಾಟಕ ಸರ್ಕಾರ**

ಸಂಖ್ಯೆ:ಪ್ರಇ 24 ಪ್ರವಾವಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ
ಬೆಂಗಳೂರು ದಿನಾಂಕ: 21.02.2018

Stand
15/02/19

ಇವರಿಂದ,

ಸರ್ಕಾರದ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ
ವಿಕಾಸ ಸೌಧ, ಬೆಂಗಳೂರು.

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ [illegible] ರವರು ಮಂಡಿಸಿರುವ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1231 ಕ್ಕೆ ಉತ್ತರ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1231 ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

[signature]

[ಬಿ.ಎನ್.ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 1231
**ಮಾನ್ಯ ಸದಸ್ಯರ ಹೆಸರು** : ಶ್ರೀ ಆನಂದ್ @ ವಿಶ್ವನಾಥ ಚಂದ್ರಶೇಖರ್ ಮಾಮನಿ (ಸವದತ್ತಿ ಯಲ್ಲಮ್ಮ)
**ವಿಷಯ** : ಪ್ರವಾಸಿ ಟ್ಯಾಕ್ಸಿಗಳ ಮಂಜೂರಾತಿ
**ಉತ್ತರಿಸುವ ದಿನಾಂಕ** : 15.02.2019
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2018-19ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಯ ಸವದತ್ತಿ ಯಲ್ಲಮ್ಮ ವಿಧಾನಸಭಾ ಕ್ಷೇತ್ರಕ್ಕೆ ಎಷ್ಟು ಪ್ರವಾಸಿ ಟ್ಯಾಕ್ಸಿಗಳು ಮಂಜೂರಾಗಿವೆ; (ಜಾತಿವಾರು ಫಲಾನುಭವಿಗಳ ವಿವರ ನೀಡುವುದು) | 2018-19ನೇ ಸಾಲಿನಲ್ಲಿ ಸವದತ್ತಿ ತಾಲ್ಲೂಕಿಗೆ ನಿಗಧಿಪಡಿಸಿದ ಗುರಿ ವಿವರ ಕೆಳಗಿನಂತೆ.<br>**ಜಾತಿ / ವರ್ಗ** — **ಭೌತಿಕ ಗುರಿ**<br>ಪರಿಶಿಷ್ಟ ಜಾತಿ — 01<br>ಪರಿಶಿಷ್ಟ ಪಂಗಡ — 01<br>ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗ — 01<br>ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದ್ದು, ಸಧ್ಯದಲ್ಲಿಯೇ ಅಂತಿಮ ಆಯ್ಕೆ ಪಟ್ಟಿ ಪ್ರಕಟಿಸಲಾಗುತ್ತದೆ. |
| ಆ) | ಪ್ರವಾಸಿ ಟ್ಯಾಕ್ಸಿ ಯೋಜನೆಯ ಫಲಾನುಭವಿಗಳ ಆಯ್ಕೆಯಲ್ಲಿ ಅನುಸರಿಸುವ ಮಾನದಂಡಗಳೇನು; ಆಯ್ಕೆ ಪ್ರಕ್ರಿಯೆಯಲ್ಲಿ ವಿಧಾನಸಭಾ ಕ್ಷೇತ್ರದ ಜನಪ್ರತಿನಿಧಿಗಳ ಪಾತ್ರವೇನು; (ವಿವರ ನೀಡುವುದು) | ಪ್ರವಾಸಿ ಟ್ಯಾಕ್ಸಿ ಸಹಾಯಧನ ಯೋಜನೆಯಡಿ ಫಲಾನುಭವಿಗಳನ್ನು ಆಯ್ಕೆ ಮಾಡುವ ಸಂಬಂಧ ಅನುಸರಿಸಬೇಕಾದ ಮಾರ್ಗಸೂಚಿಗಳನ್ನು **ಅನುಬಂಧ-1** ಮತ್ತು **ಅನುಬಂಧ-2** ರಲ್ಲಿ ಒದಗಿಸಿದೆ.<br>ಮಾರ್ಗಸೂಚಿಗಳನ್ವಯ ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿಯ ಮುಂದೆ ಪರಿಶೀಲಿಸಿದ ಅರ್ಜಿಗಳ ಪಟ್ಟಿಯನ್ನು ಮಂಡಿಸಿ ಫಲಾನುಭವಿಗಳನ್ನು ಆಯ್ಕೆ ಮಾಡಬೇಕಾಗಿರುತ್ತದೆ. ಮಾನ್ಯ ಶಾಸಕರು ಈ ಸಮಿತಿಯ ಸದಸ್ಯರಾಗಿರುತ್ತಾರೆ. **(ಅನುಬಂಧ-3)** |
| ಇ) | ಸರ್ಕಾರ ತೆಗೆದುಕೊಳ್ಳುವ ಅಭಿವೃದ್ಧಿ ಯೋಜನೆಗಳ (ಪ್ರವಾಸಿ ಟ್ಯಾಕ್ಸಿಗಳ ಸಹಿತ) ಮಾಹಿತಿಯನ್ನು ಜನಪ್ರತಿನಿಧಿಗಳಿಗೆ ಲಭ್ಯವಾಗುವಂತೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಪ್ರವಾಸೋದ್ಯಮ ಇಲಾಖೆ ಕೈಗೊಳ್ಳುವ ಯೋಜನೆಗಳ ಮತ್ತು ಅಭಿವೃದ್ಧಿ ಕಾಮಗಾರಿಗಳ ಬಗ್ಗೆ ಇಲಾಖೆಯ ವೆಬ್‌ಸೈಟ್ ನಲ್ಲಿ ಮಾಹಿತಿ ಲಭ್ಯವಿರುತ್ತದೆ. ಪ್ರಸ್ತುತವಿರುವ ಇಲಾಖೆಯ ವೆಬ್‌ಸೈಟ್‌ನ್ನು ಇನ್ನೂ ಬಲಪಡಿಸಲು ಕ್ರಮವಹಿಸಲಾಗುವುದು. |

ಪ್ರಇ 24 ಪ್ರವಾವಿ 2019

14/2/19

(ಸಾ.ರಾ.ಮಹೇಶ್)
ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು

## ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1231 ಕ್ಕೆ
## ಅನುಬಂಧ-1

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 2016-17ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್ ಪಿ ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವರ್ಗದ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಪ್ರವಾಸಿ ಟ್ಯಾಕ್ಸಿಗಳನ್ನು ವಿತರಿಸುವ ಸಂಬಂಧ ಮಾರ್ಗಸೂಚಿಗಳು

ಓದಲಾಗಿದೆ: ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆರವರ ಕಡತ ಸಂಖ್ಯೆ: ಪ್ರಇ/ಯೋ-1/26/2016-17.

....

ಪ್ರಸ್ತಾವನೆ:

ಮೇಲೆ ಓದಲಾದ ಕಡತದಲ್ಲಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆರವರು 2016-17ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ. ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪಂಗಡದ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸಿಕೊಡಲು ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸುವ ಸಂಬಂಧ ಸಿದ್ಧಪಡಿಸಿರುವ ಪರಿಷ್ಕೃತ ಮಾರ್ಗಸೂಚಿಗಳಿಗೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ

ಸರ್ಕಾರದ ಆದೇಶ ಸಂಖ್ಯೆ:ಪ್ರಇ 243 ಪ್ರವಾಯೋ 2016 ದಿನಾಂಕ:8-9-2016

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2016-17ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ. ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪಂಗಡದ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸಿಕೊಡಲು ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸುವ ಸಂಬಂಧ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಪರಿಷ್ಕೃತ ಮಾರ್ಗಸೂಚಿಗಳಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಬಿ.ಎನ್.ಯತಿರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಇವರಿಗೆ:

1. ಮಹಾಲೇಖಪಾಲರು(ಲೆಕ್ಕಪತ್ರ/ಲೆಕ್ಕಪರಿಶೋಧನೆ), ಕರ್ನಾಟಕ, ಬೆಂಗಳೂರು
2. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
3. ಎಲ್ಲಾ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ.
4. ಶಾಖಾರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಸರ್ಕಾರದ ಆದೇಶ ಸಂಖ್ಯೆ: ಪ್ರಇ 243 ಪ್ರವಾಯೋ 2016 ದಿನಾಂಕ: 8-9-2016ಕ್ಕೆ ಅನುಬಂಧ.

## 2016-17ನೇ ಸಾಲಿನಲ್ಲಿ ಪ್ರವಾಸೋದ್ಯಮ ಇಲಾಖೆಯಲ್ಲಿ ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿ ಯೋಜನೆ ಅಡಿಯಲ್ಲಿ ಪರಿಶಿಷ್ಠ ಜಾತಿ ಹಾಗೂ ಪರಿಶಿಷ್ಠ ಪಂಗಡದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸುವ ಸಂಬಂಧ ತಯಾರಿಸಿರುವ ಮಾರ್ಗಸೂಚಿಗಳು

ಯೋಜನೆ:

- ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಲಘು ವಾಹನ ಚಾಲನಾ ಪರವಾನಗಿ ಹೊಂದಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಠ ಪಂಗಡಕ್ಕೆ ಸೇರಿದ ಅರ್ಹ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸಿಕೊಳ್ಳುವ ದೃಷ್ಟಿಯಿಂದ ಪ್ರವಾಸಿ ತಾಣಗಳಿಗೆ ಪ್ರವಾಸಿಗರನ್ನು ಕರೆದುಕೊಂಡು ಹೋಗಲು ಸಹಾಯಧನದ ಮೂಲಕ ಪ್ರವಾಸಿ ಟ್ಯಾಕ್ಸಿಗಳನ್ನು ಒದಗಿಸುವುದು.

ಯೋಜನೆಯ ಘಟಕ ವೆಚ್ಚ:

ಫಲಾನುಭವಿಯು ಸ್ವ-ಇಚ್ಛೆಯಿಂದ ಯಾವುದೇ ಮಾದರಿಯ ವಾಹನವನ್ನು ಖರೀದಿಸಬಹುದು. ಈ ವಾಹನದ ಘಟಕ ವೆಚ್ಚದ ವಿವರವು ಕೆಳಕಂಡಂತಿದೆ.

- ಇಲಾಖೆಯ ಸಹಾಯಧನ - ರೂ.2.00 ಲಕ್ಷಗಳು ಮಾತ್ರ.
- ಫಲಾನುಭವಿಯ ವಂತಿಗೆ - ವಾಹನದ ಒಟ್ಟು ವೆಚ್ಚದ ಶೇ.[illegible] ರಷ್ಟು
- ಬ್ಯಾಂಕ್ ಸಾಲ - ವಾಹನದ ಒಟ್ಟು ವೆಚ್ಚದಲ್ಲಿ ಉಳಿದ ಮೊತ್ತ.

ಜಿಲ್ಲಾವಾರು ಗುರಿ :

ಇಲಾಖೆಯಿಂದ ಪ್ರತಿ ಜಿಲ್ಲೆಗೆ ನಿಗಧಿಪಡಿಸಿದ ಅಭ್ಯರ್ಥಿಗಳ ಗುರಿಯನ್ನು ಜಿಲ್ಲಾಧಿಕಾರಿಗಳು ತಮ್ಮ ಜಿಲ್ಲೆಯ ತಾಲ್ಲೂಕುವಾರು ಜನಸಂಖ್ಯೆಗೆ ಅನುಗುಣವಾಗಿ ನಿಗಧಿಪಡಿಸುವುದು. ಈ ಗುರಿಯನ್ನು ಜಿಲ್ಲೆಯಲ್ಲಿರುವ ಲೀಡ್ ಬ್ಯಾಂಕ್(ಡಿ.ಎಲ್.ಬಿ.ಸಿ)ಗೆ ರವಾನಿಸಿ ಬ್ಯಾಂಕ್ ಸಾಲ ಮಂಜೂರು ಮಾಡಿಸಲು ಕ್ರಮ ವಹಿಸುವುದು.

ಪ್ರವಾಸಿ ಟ್ಯಾಕ್ಸಿ ವಿತರಣೆ ಪ್ರಕ್ರಿಯೆ ಕಾಲಾವಧಿ :

| ಕ್ರ.ಸಂ. | ಪ್ರಕ್ರಿಯೆ | ದಿನಾಂಕ |
|---|---|---|
| 1 | ಅರ್ಜಿ ಆಹ್ವಾನಿಸಲು ಪತ್ರಿಕಾ ಪ್ರಕಟಣೆ ಹೊರಡಿಸುವುದು | |
| 2 | ಅರ್ಜಿ ವಿತರಣೆ | |
| 3 | ಅರ್ಜಿ ಸ್ವೀಕರಿಸುವುದು | |
| 4 | ಸ್ವೀಕರಿಸಿದ ಅರ್ಜಿಗಳ ಪರಿಶೀಲನೆ | |
| 5 | ಪರಿಶೀಲಿಸಿದ ಅರ್ಜಿಗಳ ಪಟ್ಟಿಯನ್ನು ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ ಸಭೆ ಕರೆದು ಸಮಿತಿಯ ಮುಂದೆ ಮಂಡಿಸಿ ಫಲಾನುಭವಿಗಳನ್ನು ಆಯ್ಕೆ ಮಾಡುವುದು | ಪ್ರವಾಸೋದ್ಯಮ ನಿರ್ದೇಶಕರು ನಿರ್ಧರಿಸುವುದು |
| 6 | ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆ ಆಹ್ವಾನ | |
| 7 | ಸ್ವೀಕರಿಸಿದ ಆಕ್ಷೇಪಣೆಗಳ ಇತ್ಯರ್ಥಪಡಿಸುವುದು | |

| ಕ್ರ ಸಂ | ಪ್ರಕ್ರಿಯೆ | ದಿನಾಂಕ |
|---|---|---|
| 8 | ಅಂತಿಮ ಫಲಾನುಭವಿಗಳ ಆಯ್ಕೆ ಪಟ್ಟಿ ಪ್ರಕಟಣೆ | |
| 9 | ಫಲಾನುಭವಿಗಳ ಪಟ್ಟಿಯನ್ನು ಬ್ಯಾಂಕ್ ಸಾಲ ಒದಗಿಸಲು ಬ್ಯಾಂಕ್‌ಗೆ ಸಲ್ಲಿಸುವುದು | |
| 10 | ಬ್ಯಾಂಕ್ ಸಾಲ ಮಂಜೂರಾದ ನಂತರ ಇಲಾಖೆಯು ಸಹಾಯಧನವನ್ನು ಬ್ಯಾಂಕ್‌ಗೆ ಜಮಾ ಮಾಡುವುದು | ಪ್ರಧಾನೋದ್ಯಮ ನಿರ್ದೇಶಕರು ನಿರ್ಧರಿಸುವುದು |
| 11 | ಪ್ರವಾಸಿ ಟ್ಯಾಕ್ಸಿ ವಿತರಣೆ | |
| 12 | ಪ್ರವಾಸಿ ಟ್ಯಾಕ್ಸಿ ವಿತರಣೆ ಮಾಡಿರುವ ಬಗ್ಗೆ ಇಲಾಖೆಗೆ ವರದಿ ಸಲ್ಲಿಸಲು ಕೊನೆಯ ದಿನ | |

ಆಯ್ಕೆ ಸಮಿತಿ :

ಫಲಾನುಭವಿಗಳ ಅರ್ಹತಾ ಪಟ್ಟಿ ಆಯ್ಕೆ ಮಾಡುವ ಸಮಿತಿ

ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸುವುದು.

1. ಉಪ ವಿಭಾಗಾಧಿಕಾರಿಗಳು- ಅಧ್ಯಕ್ಷರು.
2. ತಹಶೀಲ್ದಾರ್ (ಆಯಾ ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವವರು).
3. ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು-ಸದಸ್ಯ ಕಾರ್ಯದರ್ಶಿಗಳು.
4. ಜಿಲ್ಲಾ ಸಮಾಜ ಕಲ್ಯಾಣ ಇಲಾಖೆ ಅಧಿಕಾರಿ. ಪಿಎಸ್‌ಡಬ್ಲ್ಯು -ಸದಸ್ಯರು.
5. ಜಿಲ್ಲಾ ಸಮಗ್ರ ಗಿರಿಜನ ಅಭಿವೃದ್ಧಿ ಅಧಿಕಾರಿ-ಸದಸ್ಯರು
6. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಧಿಕಾರಿ (ಬೆಂಗಳೂರು ನಗರಕ್ಕೆ ಸಂಬಂಧಿಸಿದಂತೆ)-ಸದಸ್ಯರು
7. ಪ್ರಾದೇಶಿಕ ಸಾರಿಗೆ ಅಧಿಕಾರಿ - ಸದಸ್ಯರು.
8. ವ್ಯವಸ್ಥಾಪಕರು. ಲೀಡ್ ಬ್ಯಾಂಕ್ - ಸದಸ್ಯರು.
9. ಡಾ. ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದ ಅಧಿಕಾರಿ - ಸದಸ್ಯರು.
10. ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮದ ಅಧಿಕಾರಿ - ಸದಸ್ಯರು.

ಆಯ್ಕೆ ವಿಧಾನ:

- ಫಲಾನುಭವಿಗಳ ಆಯ್ಕೆಯಲ್ಲಿ ಅಭ್ಯರ್ಥಿಯ ವಯಸ್ಸು ಹಾಗೂ ಎಸ್.ಎಸ್.ಎಲ್.ಸಿ ಪಡೆದ ಅಂಕದ ಶೇಕಡ ([illegible]) ಎರಡರ ಆಧಾರದ ಮೇಲೆ ಕ್ರಮವಾಗಿ 60 ಮತ್ತು 40 ಆದ್ಯತೆಯನ್ನು ನೀಡಿ ಈ ಕೆಳಕಂಡ ಮಾನದಂಡಗಳ ಮೂಲಕ ಆಯ್ಕೆ ಮಾಡುವುದು.

1. ಅಭ್ಯರ್ಥಿಯ ವಯಸ್ಸಿನ ಜೇಷ್ಠತೆ ಮೇರೆಗೆ : -

ಸೂತ್ರ = ಅಭ್ಯರ್ಥಿ ವಯಸ್ಸು x 100 / ನಿಗದಿಪಡಿಸಿದ ವಯಸ್ಸು (40)

= ಬರುವ ಫಲಿತಾಂಶ x 60 / 100 = ಅಭ್ಯರ್ಥಿಯ ವಯಸ್ಸಿನ ಜೇಷ್ಠತೆ ಮೇರೆಗೆ ಪಡೆದ ಫಲಿತಾಂಶ

[A]

2. ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತೆ ಮೇರೆಗೆ :-

ಸೂತ್ರ = ಎಸ್.ಎಸ್.ಎಲ್.ಸಿ ಯಲ್ಲಿ ಅಭ್ಯರ್ಥಿಯು ಪಡೆದ ಒಟ್ಟು ಅಂಕಗಳ ಶೇಕಡ x 100
ನಿಗದಿಪಡಿಸಿರುವ ಅಂಕದ ಮಿತಿ [45%]

= ಬರುವ ಫಲಿತಾಂಶ x 40 / 100 = ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತೆ ಮೇರೆಗೆ ಪಡೆದ ಫಲಿತಾಂಶ [B]

ಅಭ್ಯರ್ಥಿಯ ವಯಸ್ಸಿನ ಜೇಷ್ಠತೆ ಮೇರೆಗೆ ಪಡೆದ ಫಲಿತಾಂಶ[A] + ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತ ಮೇರೆಗೆ ಪಡೆದ ಫಲಿತಾಂಶ [B]

= ಅಭ್ಯರ್ಥಿ ಪಡೆಯುವ ಒಟ್ಟು ಶೇಕಡವಾರು ಫಲಿತಾಂಶ.

ಅಭ್ಯರ್ಥಿಯು ಪಡೆಯುವ ಒಟ್ಟು ಶೇಕಡವಾರು ಪಲಿತಾಂಶದ ಏರಿಕೆಯಿಂದ ಇಳಿಕೆ ಕ್ರಮದಲ್ಲಿ [Descending Order] ಬರುವ ಶೇಕಡವಾರು ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡತಕ್ಕದ್ದು

3. ಮಹಿಳೆಯರಿಗೆ ಶೇ. 10% ರಷ್ಟು ಗುರಿಗಳನ್ನು ಮೀಸಲಿರಿಸುವುದು. ಮಹಿಳಾ ಅಭ್ಯರ್ಥಿಗಳು ಅರ್ಜಿ ಸಲ್ಲಿಸದೇ ಇದ್ದಲ್ಲಿ, ಪುರುಷ ಅಭ್ಯರ್ಥಿಗಳಿಗೆ ಸದರಿ ಗುರಿಗಳನ್ನು ಹಂಚಿಕೆ ಮಾಡತಕ್ಕದ್ದು

ಫಲಾನುಭವಿಗಳ ಆಯ್ಕೆಯಲ್ಲಿ ಆದ್ಯತೆ ನೀಡಬೇಕಾದ ಅಂಶಗಳು:

- ನಿಯಮ ರೀತ್ಯ ಮಹಿಳೆಯರು ಅರ್ಜಿ ಸಲ್ಲಿಸಿದ್ದಲ್ಲಿ ಆದ್ಯತೆ ನೀಡಬಹುದಾಗಿದೆ.
- ಬಿ.ಪಿ.ಎಲ್. ರೇಖೆಗಿಂತ ಕೆಳಗಿರುವವರಿಗೆ ಆದ್ಯತೆ ನೀಡತಕ್ಕದ್ದು.
- ಅಭ್ಯರ್ಥಿಯ ಕುಟುಂಬದಲ್ಲಿ ಯಾವ ಒಬ್ಬ ಸದಸ್ಯನು ಸರ್ಕಾರಿ ನೌಕರಿ ಹೊಂದಿಲ್ಲದೆ ಇರುವುದನ್ನು ಖಚಿತಪಡಿಸಿಕೊಳ್ಳಬೇಕು.
- ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರೆ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ, ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ.

ವಾಹನ ಸಾಲ ಮೇಳ:

- ಪ್ರವಾಸಿ ಟ್ಯಾಕ್ಸಿ ಖರೀದಿಸಲು ಎಲ್ಲಾ ಜಿಲ್ಲೆಯಲ್ಲಿಯೂ ಫಲಾನುಭವಿಗಳಿಗೆ ಸೂಕ್ತವಾದ ಬ್ಯಾಂಕ್ ಸಾಲ ದೊರಕುವಂತೆ ಮಾಡಲು ಲೀಡ್ ಬ್ಯಾಂಕ್ ವ್ಯವಸ್ಥಾಪಕರೊಂದಿಗೆ ಹಾಗೂ ವಿವಿಧ ವಾಹನ ಏಜೆನ್ಸಿಯವರೊಂದಿಗೆ ವಾಹನ ಸಾಲ ಮೇಳ ಜರುಗಿಸಿ ಸ್ಥಳದಲ್ಲಿ ಸಾಲ ಮಂಜೂರಿಸಿದ ಬ್ಯಾಂಕ್‌ಗಳಿಗೆ ಮಂಜೂರಾತಿ ಅನುಪಾತಕ್ಕೆ ಅನುಗುಣವಾಗಿ ಸಹಾಯಧನ ವಿತರಿಸುವುದು.

7/-

**ಅರ್ಜಿದಾರರು ಹೊಂದಿರಬೇಕಾದ ಅರ್ಹತೆಗಳು**

ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ಖರೀದಿಸುವ ಯೋಜನೆಯ ಪ್ರಯೋಜನ ಪಡೆಯಲು ಅರ್ಜಿ ಸಲ್ಲಿಸಲು ಅರ್ಜಿದಾರರು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

ಅ) ಅರ್ಜಿದಾರರು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು

ಆ) ಅರ್ಜಿದಾರರ ವಯಸ್ಸು 20 ರಿಂದ 40 ವರ್ಷದೊಳಗಿರಬೇಕು

ಇ) ಅರ್ಜಿದಾರರು 10ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು.

ಈ) ಅಭ್ಯರ್ಥಿಗಳು ಲಘು ವಾಹನ ಚಾಲನಾ ಪರವಾನಗಿ ಪಡೆದು ಕನಿಷ್ಠ ಒಂದು ವರ್ಷವಾಗಿರಬೇಕು. ಅಭ್ಯರ್ಥಿಗಳು ವಾಹನ ಪರವಾನಗಿಯೊಂದಿಗೆ ಬ್ಯಾಡ್ಜ್ ಹೊಂದಿರತಕ್ಕದ್ದು.

ಉ) ನಗರ ಪ್ರದೇಶದ ಫಲಾನುಭವಿಗಳ ವಾರ್ಷಿಕ ಆದಾಯ ರೂ.2.00 ಲಕ್ಷ ಮೀರಬಾರದು.

ಊ) ಗ್ರಾಮಾಂತರ ಪ್ರದೇಶದ ಫಲಾನುಭವಿಗಳ ವಾರ್ಷಿಕ ಆದಾಯ ರೂ.1.50 ಲಕ್ಷ ಮೀರಬಾರದು

ಋ) ಅರ್ಜಿದಾರರು ಯಾವ ಜಿಲ್ಲೆಯ ನಿವಾಸಿಯಾಗಿರುತ್ತಾರೋ ಅದೇ ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸಬೇಕು

ಎ) ಅರ್ಜಿದಾರರು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಅಥವಾ ನಿಗಮ ಮಂಡಳಿಗಳಲ್ಲಿ ಖಾಯಂ ನೌಕರಿಯಲ್ಲಿರಬಾರದು.

ಏ) ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರೆ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ. ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ.

**ಅರ್ಜಿದಾರರು ಸಲ್ಲಿಸಬೇಕಾದ ದಾಖಲೆಗಳು :**

ಅ) ಜಿಲ್ಲಾಧಿಕಾರಿಗಳಿಂದ ಜಾಹೀರಾತು ಪ್ರಕಟಣೆಗೊಂಡ 30 ದಿನಗಳ ಒಳಗಾಗಿ ನಿಗದಿಪಡಿಸಿದ ಅರ್ಜಿ ನಮೂನೆಯನ್ನು ಭರ್ತಿ ಮಾಡಿ ಇತ್ತೀಚಿನ ಭಾವಚಿತ್ರದೊಂದಿಗೆ ದ್ವಿಪ್ರತಿಯಲ್ಲಿ ಸಲ್ಲಿಸಬೇಕು.

ಆ) ಪಡಿತರ ಚೀಟಿ ಹಾಗೂ ಆಧಾರ್ ಕಾರ್ಡ್‌ನ ಪ್ರತಿಗಳನ್ನು ಸಲ್ಲಿಸುವುದು ಕಡ್ಡಾಯವಾಗಿರುತ್ತದೆ.

ಇ) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿರುವ ಬಗ್ಗೆ ತಹಶೀಲ್ದಾರರಿಂದ ಪಡೆದುಕೊಂಡಿರುವ ಚಾಲ್ತಿಯಲ್ಲಿರುವ ಜಾತಿ ಪ್ರಮಾಣ ಪತ್ರದ ಪ್ರತಿ.

ಈ) ತಹಶೀಲ್ದಾರರಿಂದ ಪಡೆದುಕೊಂಡಿರುವ ಚಾಲ್ತಿಯಲ್ಲಿರುವ ಆದಾಯದ ಪ್ರಮಾಣ ಪತ್ರದ ಪ್ರತಿ.

ಉ) ತಹಶೀಲ್ದಾರ್/ಮಹಾನಗರ ಪಾಲಿಕೆ/ನಗರ ಪಾಲಿಕೆ/ನಗರಸಭೆ/ಪುರಸಭೆ/ಗ್ರಾಮ ಪಂಚಾಯ್ತಿ/ಪಟ್ಟಣ ಪಂಚಾಯ್ತಿ-ಗಳಿಂದ ಪಡೆದಿರುವ ವಾಸಸ್ಥಳ ದೃಢೀಕರಣ ಪತ್ರದ ಪ್ರತಿ.

ಊ) ಖಾಯಂ ಲಘು ವಾಹನ ಚಾಲನಾ ಪರವಾನಗಿ ಪತ್ರ ಹಾಗೂ ಆರ್.ಟಿ.ಓ ರವರಿಂದ ಪಡೆದಿರುವ ಡಿ.ಎಲ್ ಎಕ್ಸ್‌ಟ್ರಾಕ್ಟ್‌ಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

ಋ) ವಿದ್ಯಾರ್ಹತೆಯ ಬಗ್ಗೆ ಕನಿಷ್ಠ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗಿರುವ ಅಂಕಪಟ್ಟಿಯ ಪ್ರತಿ

ಎ) ಅರ್ಜಿದಾರನು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಅಥವಾ ನಿಗಮ ಮಂಡಳಿಗಳಲ್ಲಿ ಖಾಯಂ ನೌಕರಿಯಲ್ಲಿರದ ಬಗ್ಗೆ. ಅಭ್ಯರ್ಥಿಯ ಕುಟುಂಬದಲ್ಲಿ ಯಾವ ಒಬ್ಬ ಸದಸ್ಯನು ಸರ್ಕಾರಿ ನೌಕರಿ ಹೊಂದಿಲ್ಲದ ಬಗ್ಗೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ/ನಗರಸಭೆ/ಪುರಸಭೆ/ಪಟ್ಟಣ ಪಂಚಾಯ್ತಿ /ಗ್ರಾಮ ಪಂಚಾಯ್ತಿ-ಇವುಗಳಿಂದ ಸ್ವಉದ್ಯೋಗ ಕಲ್ಪಿಸಿಕೊಳ್ಳುವ ಸೌಲಭ್ಯ ಪಡೆಯದೇ ಇರುವ ಬಗ್ಗೆ ಕುಟುಂಬದ ಯಾವ ಸದಸ್ಯನು ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿಲ್ಲ ಎಂಬ ಬಗ್ಗೆ ಹಾಗೂ ಸ್ವಯಂ ಪ್ರಮಾಣಿಕರಿಸಿ. ರೂ.50/-ರ ಬೆಲೆಯ ಛಾಪಾ ಕಾಗದ (Affidavit)ದಲ್ಲಿ ನಮೂನೆ-3ರಲ್ಲಿ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು.

ಏ) ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರೆ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ. ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ. ಈ ಸಂಬಂಧ ಅಭ್ಯರ್ಥಿಯಿಂದ ಪಡಿತರ ಚೀಟಿಯನ್ನು ಆಧಾರವಾಗಿ ಪಡೆಯತಕ್ಕದ್ದು.

ಐ) ಅರ್ಜಿಯಲ್ಲಿ ಅಭ್ಯರ್ಥಿಗಳ ದೂರವಾಣಿ ಸಂಖ್ಯೆಗಳನ್ನು ನಮೂದಿಸುವುದು ಕಡ್ಡಾಯ.

ಒ) ಆಯ್ಕೆಯಾದ ನಂತರ ಅಭ್ಯರ್ಥಿಗಳ ವಿರುದ್ಧ ಯಾವುದೇ ಕ್ರಿಮಿನಲ್ ಮೊಕದ್ದಮೆ ಇಲ್ಲದೇ ಇರುವ ಬಗ್ಗೆ ಆಯಾ ವ್ಯಾಪ್ತಿಯ ಪೊಲೀಸ್ ಠಾಣೆಯಿಂದ ಪೊಲೀಸ್ ನಿರಾಕ್ಷೇಪಣಾ ಪತ್ರವನ್ನು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಪಡೆಯುವುದು.

ಓ) ಅರ್ಜಿದಾರನು ಮೇಲಿನ ಎಲ್ಲಾ ದಾಖಲಾತಿಗಳನ್ನು ಸ್ವಯಂ ದೃಢೀಕರಿಸಿ ಸಲ್ಲಿಸತಕ್ಕದ್ದು.

ಔ) ಆಯ್ಕೆಯಾದ ಅಭ್ಯರ್ಥಿಗಳಿಂದ ತಮಗೆ ವಿತರಿಸುವ ಪ್ರವಾಸಿ ವಾಹನವನ್ನು ಯಾರಿಗೂ ಪರಭಾರೆ ಮಾಡುವುದಿಲ್ಲವೆಂದು ನೋಟರಿಯಿಂದ ಪ್ರಮಾಣಿಕರಿಸಿ ರೂ.50/-ರ ಬೆಲೆಯ ಛಾಪಾ ಕಾಗದ (Affidavit)ದಲ್ಲಿ ಮುಚ್ಚಳಿಗೆ ಪಡೆಯತಕ್ಕದ್ದು.

ಷರತ್ತುಗಳು :

ಅ) ಫಲಾನುಭವಿಯೇ ಸ್ವತಃ ಟ್ಯಾಕ್ಸಿಯನ್ನು ಓಡಿಸಬೇಕು ಹೊರತು ಬೇರೆಯವರಿಗೆ ಪರಭಾರೆ ಮಾಡುವಂತಿಲ್ಲ. ಒಂದು ವೇಳೆ ಪರಭಾರೆ ಮಾಡಿರುವುದು ಕಂಡುಬಂದಲ್ಲಿ ಟ್ಯಾಕ್ಸಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಈ ಬಗ್ಗೆ ಜಿಲ್ಲಾಧಿಕಾರಿಗಳು ಆರ್.ಟಿ.ಒ.ಗಳಿಗೆ ಪತ್ರ ಮುಖೇನ ತಿಳಿಸುವುದು. ಸದರಿ ವಾಹನವನ್ನು (05) ವರ್ಷಗಳವರೆಗೆ ಬೇರೆಯವರಿಗೆ ವರ್ಗಾವಣೆ ಮಾಡದಂತೆ ಕ್ರಮವಹಿಸುವುದು.

ಆ) ಪ್ರತಿ ವರ್ಷ ಫಲಾನುಭವಿಯು ಗಳಿಸಿದ ಆದಾಯದ ವಿವರಗಳನ್ನು ಜಿಲ್ಲಾ ಮಟ್ಟದ ಇಲಾಖೆಯ ಕಛೇರಿಗೆ ನೀಡುವುದು.

ಇ) ಫಲಾನುಭವಿಯು ತೆಗೆದುಕೊಳ್ಳುವ ಬ್ಯಾಂಕಿನ ಸಾಲದ ಮೊತ್ತವನ್ನು ನಿರಂತರವಾಗಿ ಮರುಪಾವತಿ ಮಾಡುವುದು.



ಕರ್ನಾಟಕ ಸರ್ಕಾರ

(27)

ಸಂಖ್ಯೆ: ಪ್ರಇ 47 ಪ್ರವಾಯೋ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:06.02.2017

## ತಿದ್ದುಪಡಿ ಆದೇಶ

2016-17ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸಲು ಮಂಜೂರಾತಿ ನೀಡಿ ಹೊರಡಿಸಿರುವ ಆದೇಶ ಸಂಖ್ಯೆ: ಪ್ರಇ 243 ಪ್ರವಾಯೋ 2016, ದಿನಾಂಕ:08.09.2016ರ ಅನುಬಂಧದಲ್ಲಿರುವ ಆಯ್ಕೆ ವಿಧಾನದ ಕ್ರಮ ಸಂಖ್ಯೆ:3ರಲ್ಲಿ "ಮಹಿಳೆಯರಿಗೆ ಶೇ.10ರಷ್ಟು ಗುರಿಗಳನ್ನು ಮೀಸಲಿರಿಸುವುದು" ಎಂಬುದರ ಬದಲಿಗೆ "ಮಹಿಳೆಯರಿಗೆ ಶೇ.15ರಷ್ಟು ಗುರಿಗಳನ್ನು ಮೀಸಲಿರಿಸುವುದು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

6/2/17

[ಬಿ.ಎನ್.ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಇವರಿಗೆ,

1. ಮಹಾಲೇಖಪಾಲರು (ಲೆಕ್ಕ ಪತ್ರ /ಲೆಕ್ಕ ಪರಿಶೋಧನೆ) ಕರ್ನಾಟಕ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.
3. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
4. ಎಲ್ಲಾ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ.
5. ಜಂಟಿ ನಿರ್ದೇಶಕರು, ರಾಜ್ಯ ಹುಜೂರು ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು-01.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿ:

1. ಮಾನ್ಯ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ಪ್ರವಾಸೋದ್ಯಮ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ.
2. ಮಾನ್ಯ ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ.

ನಮೂನೆ–2

## ಪ್ರವಾಸಿ ಟ್ಯಾಕ್ಸಿ ವಿತರಣೆ ಕಾರ್ಯಕ್ರಮ:

**ಜಿಲ್ಲೆಯ ಹೆಸರು:**

**ವರ್ಷ:**

| ಕ್ರ.ಸಂ | ಫಲಾನುಭವಿಯ ಹೆಸರು | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ | ವಿಳಾಸ | ತಾಲ್ಲೂಕು | ಸಹಾಯಧನದ ಮೊತ್ತ | ಆಧಾರ್ ನಂ: | ಮೊಬೈಲ್ ನಂ: |
|---|---|---|---|---|---|---|---|
| 1 | | | | | | | |
| 2 | | | | | | | |
| 3 | | | | | | | |

ದಿನಾಂಕ:

ಅಧಿಕಾರಿಯ ಸಹಿ ಮತ್ತು ಪದನಾಮ

ನಮೂನೆ-3

ರೂ.50 ಛಾಪಾ ಕಾಗದ

## ಸ್ವಯಂ ದೃಢೀಕರಣ ಪತ್ರ

ಶ್ರೀ/ಶ್ರೀಮತಿ/ಕುಮಾರಿ ____________ತಂದೆ/ಗಂಡನ ಹೆಸರು____________ ಆದ ನಾನು ________ ಮನೆ ನಂ. __________ಗ್ರಾಮ, __________ಹೋಬಳಿ, _________ತಾಲ್ಲೂಕು, __________ ಜಿಲ್ಲೆಯಲ್ಲಿ ವಾಸಿಯಾಗಿದ್ದು, ಈ ಕೆಳಕಂಡ ಸೌಲಭ್ಯಗಳನ್ನು ಪಡೆದಿರುವುದಿಲ್ಲವೆಂದು ಹಾಗೂ ಇದು ಸತ್ಯವೆಂದು ಪ್ರಮಾಣೀಕರಿಸಿ, ಸ್ವಯಂ ದೃಢೀಕರಿಸುತ್ತೇನೆ.

1. ನಾನು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಅಥವಾ ನಿಗಮ ಮಂಡಳಿಗಳಲ್ಲಿ ಖಾಯಂ ನೌಕರಿಯಲ್ಲಿಲ್ಲವೆಂದು ಹಾಗೂ ನನ್ನ ಕುಟುಂಬದಲ್ಲಿ ಯಾವ ಒಬ್ಬ ಸದಸ್ಯನು ಸರ್ಕಾರಿ ನೌಕರಿ ಹೊಂದಿಲ್ಲವೆಂದು,
2. ನಾನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ/ನಗರಸಭೆ/ಪುರಸಭೆ/ಪಟ್ಟಣ ಪಂಚಾಯ್ತಿ /ಗ್ರಾಮ ಪಂಚಾಯ್ತಿ-ಇವುಗಳಿಂದ ಸ್ವ-ಉದ್ಯೋಗ ಕಲ್ಪಿಸಿಕೊಳ್ಳುವ ಸೌಲಭ್ಯ ಪಡೆದಿಲ್ಲವೆಂದು.
3. ನನ್ನ ಕುಟುಂಬದ ಯಾವ ಸದಸ್ಯನು ಈಗಾಗಲೇ ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿಲ್ಲವೆಂದು.

ಒಂದು ವೇಳೆ ಮೇಲ್ಕಂಡ ಸೌಲಭ್ಯಗಳನ್ನು ಪಡೆದಿದ್ದಲ್ಲಿ ಹಾಗೂ ನಾನು ನೀಡಿರುವ ಮಾಹಿತಿ ಸುಳ್ಳಾಗಿದ್ದಲ್ಲಿ, ನನ್ನ ವಿರುದ್ಧ ಕಾನೂನು ರೀತ್ಯಾ ಕ್ರಮ ಕೈಗೊಳ್ಳಬಹುದೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(ಅರ್ಜಿದಾರರ ಸಹಿ ಮತ್ತು ಹೆಸರು)

ಸ್ಥಳ:
ದಿನಾಂಕ:

## ನಮೂನೆ-1

## 2016-17 ನೇ ಸಾಲಿನ ಪ್ರವಾಸಿ ಟ್ಯಾಕ್ಸಿ ವಿತರಣೆ ಕಾರ್ಯಕ್ರಮ

ಜಿಲ್ಲೆಯ ಹೆಸರು:

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ವರ್ಷ | ಪರಿಶಿಷ್ಟ ಜಾತಿ | | | | | | ಪರಿಶಿಷ್ಟ ಪಂಗಡ | | | | | |
|---|---|---|---|---|---|---|---|---|---|---|---|---|---|
| | | ಭೌತಿಕ ಪ್ರಗತಿ | | | ಆರ್ಥಿಕ ಪ್ರಗತಿ | | | ಭೌತಿಕ ಪ್ರಗತಿ | | | ಆರ್ಥಿಕ ಪ್ರಗತಿ | | |
| | | ಗುರಿ | ಸಾಧನೆ | ಬಾಕಿ | ಗುರಿ | ಸಾಧನೆ | ಬಾಕಿ | ಗುರಿ | ಸಾಧನೆ | ಬಾಕಿ | ಗುರಿ | ಸಾಧನೆ | ಬಾಕಿ |
| 1 | Apr-16 | | | | | | | | | | | | |
| 2 | May-16 | | | | | | | | | | | | |
| 3 | Jun-16 | | | | | | | | | | | | |
| 4 | Jul-16 | | | | | | | | | | | | |
| 5 | Aug-16 | | | | | | | | | | | | |
| 6 | Sep-16 | | | | | | | | | | | | |
| 7 | Oct-16 | | | | | | | | | | | | |
| 8 | Nov-16 | | | | | | | | | | | | |
| 9 | Dec-16 | | | | | | | | | | | | |
| 10 | Jan-17 | | | | | | | | | | | | |
| 11 | Feb-17 | | | | | | | | | | | | |
| 12 | Mar-17 | | | | | | | | | | | | |
| ಒಟ್ಟು | | | | | | | | | | | | | |

ಷರಾ:

ದಿನಾಂಕ:

ಅಧಿಕಾರಿಯ ಸಹಿ ಮತ್ತು ಪದನಾಮ

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1231 ಕ್ಕೆ**
**ಅನುಬಂಧ-2**

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 2016-17ನೇ ಸಾಲಿನಲ್ಲಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸಲು ಮಂಜೂರಾತಿ.

ಓದಲಾಗಿದೆ: ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆರವರ ಪತ್ರ ಸಂಖ್ಯೆ:ಪ್ರಇ/ಯೋ-1/5/2016-17/2927, ದಿ:17-9-2016.

* * * *

ಪ್ರಸ್ತಾವನೆ:

ಮೇಲೆ ಓದಲಾದ ಪತ್ರದಲ್ಲಿ ಪ್ರವಾಸೋದ್ಯಮ ನಿರ್ದೇಶಕರು ಬೆಂಗಳೂರುರವರು 2016-17ನೇ ಸಾಲಿನಲ್ಲಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ 2000 ಅಭ್ಯರ್ಥಿಗಳಿಗೆ ಸ್ವ-ಉದ್ಯೋಗ ಕಲ್ಪಿಸಿಕೊಳ್ಳಲು ತಲಾ 2.00 ಲಕ್ಷಗಳ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿಗಳನ್ನು ವಿತರಿಸಲು ಉದ್ದೇಶಿಸಲಾಗಿದ್ದು, ಇದಕ್ಕಾಗಿ ಪ್ರಸಕ್ತ ಸಾಲಿನ ಲೆಕ್ಕಶೀರ್ಷಿಕೆ 3452-80-104-0-04-059 ಇತರೆ ವೆಚ್ಚಗಳು [ಯೋಜನೆ] ಅಡಿಯಲ್ಲಿ ತಯಾರಿಸಿರುವ ಕ್ರಿಯಾಯೋಜನೆಯಲ್ಲಿ ರೂ.4000.00 ಲಕ್ಷಗಳನ್ನು ಕಾಯ್ದಿರಿಸಿಕೊಳ್ಳಲಾಗಿದೆ ಎಂದು ತಿಳಿಸಿರುತ್ತಾರೆ.

ಮುಂದುವರೆದು, ರಾಜ್ಯದ 30 ಜಿಲ್ಲೆಗಳಲ್ಲಿರುವ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗದ ಜನಸಂಖ್ಯೆ, ಪ್ರವಾಸಿ ತಾಣಗಳ ಸಂಖ್ಯೆ ಹಾಗೂ ಹಿಂದುಳಿದ ತಾಲ್ಲೂಕುಗಳ ಸಂಖ್ಯೆಗಳ ಸರಾಸರಿ ಶೇಕಡವಾರು ಆಧಾರದ ಮೇಲೆ ಪ್ರವಾಸಿ ಟ್ಯಾಕ್ಸಿಗಳ ಭೌತಿಕ ಗುರಿ ಹಾಗೂ ಅನುದಾನವನ್ನು ಜಿಲ್ಲಾವಾರು ಹಂಚಿಕೆ ಮಾಡಿ ನಿಗಧಿಪಡಿಸಿದ್ದು, ಪ್ರವಾಸಿ ಟ್ಯಾಕ್ಸಿಗಳನ್ನು ಖರೀದಿಸಲು ಇಲಾಖೆಯಿಂದ ಸಹಾಯಧನ ವಿತರಣೆ ವಿಧಾನಗಳ ಬಗ್ಗೆ ಮಾರ್ಗಸೂಚಿಗಳಿಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಅಭ್ಯರ್ಥಿಗಳ ಕುಟುಂಬವು ಹೊಂದಿರಬೇಕಾಗಿರುವ ಆದಾಯದ ಮಿತಿಯನ್ನು ಮಾತ್ರ ಹಿಂದುಳಿದ ವರ್ಗಗಳು ಹಾಗೂ ಅಲ್ಪಸಂಖ್ಯಾತ ಜಾತಿಗೆ ಸೇರಿದ ಅಭ್ಯರ್ಥಿಗಳಿಗೆ ಪ್ರವಾಸಿ ಟ್ಯಾಕ್ಸಿಗಳನ್ನು ವಿತರಿಸುವ ಯೋಜನೆ ಜಾರಿಗೊಳಿಸುವುದಕ್ಕೆ ಸಂಬಂಧಪಟ್ಟಂತೆಆದೇಶ ಸಂಖ್ಯೆ:ಬಿಸಿಡಬ್ಲ್ಯೂ/525/ಬಿಎಂಎಸ್/2012, ದಿ:25-5-2016ರಲ್ಲಿ ತಿಳಿಸಿರುವನ್ವಯ ಅಭ್ಯರ್ಥಿಗಳ ಆದಾಯದ ಮಿತಿಯನ್ನು ಅನುಸರಿಸಲು ಮಾರ್ಗಸೂಚಿಗಳಲ್ಲಿ ಸೇರಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ.

ಈ ಯೋಜನೆಯಲ್ಲಿ ಒಂದು ವಾಹನಕ್ಕೆ ತಗಲುವ ಒಟ್ಟು ಮೊತ್ತದಲ್ಲಿ ರೂ.2.00ಲಕ್ಷಗಳನ್ನು ಸಹಾಯಧನವಾಗಿ ನೀಡಲಾಗುವುದು. ವಾಹನಕ್ಕೆ ತಗಲುವ ಮೊತ್ತದಲ್ಲಿ ಶೇ.5%ರಷ್ಟು ಮೊತ್ತವನ್ನು ಫಲಾನುಭವಿ ಭರಿಸುವರು ಹಾಗೂ ಉಳಿದ ಮೊತ್ತವನ್ನು ರಾಷ್ಟ್ರೀಕೃತ/ವಾಣಿಜ್ಯ ಬ್ಯಾಂಕ್‌ಗಳ ಮೂಲಕ ಸಾಲದ ರೂಪದಲ್ಲಿ ಒದಗಿಸಲಾಗುವುದೆಂದು ತಿಳಿಸಿರುತ್ತಾರೆ. ನಿಗಧಿಪಡಿಸಿರುವ ಗುರಿಯಂತೆ 2000

ಪ್ರವಾಸಿ ಟ್ಯಾಕ್ಸಿಗಳನ್ನು ವಿತರಿಸಲು ರೂ.4000.00 ಲಕ್ಷಗಳನ್ನು ರಾಜ್ಯದ 30 ಜಿಲ್ಲೆಗಳಲ್ಲಿರುವ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಸಮಿತಿರವರುಗಳಿಗೆ ಬಿಡುಗಡೆ ಮಾಡಲು ಹಾಗೂ ಲಗತ್ತಿಸಿರುವ ಮಾರ್ಗಸೂಚಿಗಳಿಗೆ ಸರ್ಕಾರದ ಅನುಮೋದನ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

<u>ಸರ್ಕಾರದ ಆದೇಶ ಸಂಖ್ಯೆ:ಪ್ರಇ 297 ಪ್ರವಾಯೋ 2016, ದಿನಾಂಕ: 02.11.2016</u>

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2016-17ನೇ ಸಾಲಿನಲ್ಲಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳಿಗೆ ರೂ.2.00ಲಕ್ಷಗಳ ಸಹಾಯಧನದೊಂದಿಗೆ 2000 ಪ್ರವಾಸಿ ಟ್ಯಾಕ್ಸಿಗಳನ್ನು ವಿತರಿಸಲು ರೂ.40.00ಕೋಟಿ (ರೂಪಾಯಿ ನಲವತ್ತು ಕೋಟಿ ಮಾತ್ರ)ಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-1ರಲ್ಲಿನ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಯೋಜನೆಯನ್ನು ಜಾರಿಗೆ ತರಲು ಅನುಬಂಧ-2ರಲ್ಲಿ ನಮೂದಿಸಿರುವ ರಾಜ್ಯದ 30 ಜಿಲ್ಲೆಗಳ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಸಮಿತಿರವರಿಗೆ ಬಿಡುಗಡೆ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಎಲ್ಲಾ ಜಿಲ್ಲಾಧಿಕಾರಿಗಳು ಟ್ಯಾಕ್ಸಿ ವಿತರಿಸಲು ಅರ್ಜಿಗಳನ್ನು ಆಹ್ವಾನಿಸಿ ಫಲಾನುಭವಿಗಳನ್ನು ಗುರುತಿಸಲು ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು ಹಾಗು ಸರ್ಕಾರದ ಮುಂದಿನ ನಿರ್ದೇಶನ ಬರುವವರೆಗೆ ವಾಹನವನ್ನು ಖರೀದಿಸತಕ್ಕದ್ದಲ್ಲ.

ಸದರಿ ವೆಚ್ಚವನ್ನು 2016-17ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ:3452-80-104-0-04-059 ಇತರೆ ವೆಚ್ಚಗಳು[ಯೋಜನೆ] ರಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ ಎಫ್.ಡಿ. 03 ಟಿ.ಎಫ್.ಪಿ.2016 ದಿ:2-4-2016ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
2/11/16
(ಬಿ.ಎನ್.ಯತಿರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಇವರಿಗೆ,

1. ಮಹಾಲೇಖಪಾಲರು(ಲೆಕ್ಕಪತ್ರ/ಲೆಕ್ಕಪರಿಶೋಧನೆ), ಕರ್ನಾಟಕ, ಬೆಂಗಳೂರು
2. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
3. ಎಲ್ಲಾ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ.
4. ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್ ವೃತ್ತ, ಬೆಂಗಳೂರು-1
5. ಶಾಖಾರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಸರ್ಕಾರದ ಆದೇಶ ಸಂಖ್ಯೆ ಪ್ರಇ 297 ಪ್ರವಾಯೋ 2016, ದಿನಾಂಕ:02.11.2016ಕ್ಕೆ
ಅನುಬಂಧ-1.

**2016-17 ನೇ ಸಾಲಿನಲ್ಲಿ ಪ್ರವಾಸೋದ್ಯಮ ಇಲಾಖೆಯಲ್ಲಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸುವ ಸಂಬಂಧ ಮಾರ್ಗಸೂಚಿಗಳು.**

**ಯೋಜನೆ:**

- ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಲಘು ವಾಹನ ಚಾಲನಾ ಪರವಾನಗಿ ಹೊಂದಿರುವ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಅರ್ಹ ನಿರುದ್ಯೋಗಿ ವಿದ್ಯಾವಂತ ಅಭ್ಯರ್ಥಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸಿಕೊಳ್ಳುವ ದೃಷ್ಟಿಯಿಂದ ಪ್ರವಾಸಿ ತಾಣಗಳಿಗೆ ಪ್ರವಾಸಿಗರನ್ನು ಕರೆದುಕೊಂಡು ಹೋಗಲು ಸಹಾಯಧನದ ಮೂಲಕ ಪ್ರವಾಸಿ ಟ್ಯಾಕ್ಸಿಗಳನ್ನು ಒದಗಿಸುವುದು.

**ಯೋಜನೆಯ ಘಟಕ ವೆಚ್ಚ:**

ಫಲಾನುಭವಿಯು ಸ್ವ-ಇಚ್ಛೆಯಿಂದ ಯಾವುದೇ ಮಾದರಿಯ ವಾಹನವನ್ನು ಖರೀದಿಸಬಹುದು. ಈ ವಾಹನದ ಘಟಕ ವೆಚ್ಚದ ವಿವರವು ಕೆಳಕಂಡಂತಿದೆ.

- ಇಲಾಖೆಯ ಸಹಾಯಧನ – ರೂ.2.00 ಲಕ್ಷಗಳು ಮಾತ್ರ.
- ಫಲಾನುಭವಿಯ ವಂತಿಗೆ – ವಾಹನದ ಒಟ್ಟು ವೆಚ್ಚದ ಶೇ.5 ರಷ್ಟು.
- ಬ್ಯಾಂಕ್ ಸಾಲ – ವಾಹನದ ಒಟ್ಟು ವೆಚ್ಚದಲ್ಲಿ ಉಳಿದ ಮೊತ್ತ.

**ಜಿಲ್ಲಾವಾರು ಗುರಿ :**

ಇಲಾಖೆಯಿಂದ ಪ್ರತಿ ಜಿಲ್ಲೆಗೆ ನಿಗದಿಪಡಿಸಿದ ಅಭ್ಯರ್ಥಿಗಳ ಗುರಿಯನ್ನು ಜಿಲ್ಲಾಧಿಕಾರಿಗಳು ತಮ್ಮ ಜಿಲ್ಲೆಯ ತಾಲ್ಲೂಕುವಾರು ಜನಸಂಖ್ಯೆಗೆ ಅನುಗುಣವಾಗಿ ನಿಗದಿಪಡಿಸುವುದು. ಈ ಗುರಿಯನ್ನು ಜಿಲ್ಲೆಯಲ್ಲಿರುವ ಲೀಡ್ ಬ್ಯಾಂಕ್(ಡಿ.ಎಲ್.ಬಿ.ಸಿ)ಗೆ ರವಾನಿಸಿ ಬ್ಯಾಂಕ್ ಸಾಲ ಮಂಜೂರು ಮಾಡಿಸಲು ಕ್ರಮ ವಹಿಸುವುದು.

**ಪ್ರವಾಸಿ ಟ್ಯಾಕ್ಸಿ ವಿತರಣೆ ಪ್ರಕ್ರಿಯೆ ಕಾಲಾವಧಿ:**

| ಕ್ರ. ಸಂ. | ಪ್ರಕ್ರಿಯೆ | ದಿನಾಂಕ |
|---|---|---|
| 1 | ಅರ್ಜಿ ಆಹ್ವಾನಿಸಲು ಪತ್ರಿಕಾ ಪ್ರಕಟಣೆ ಹೊರಡಿಸುವುದು | ಪ್ರವಾಸೋದ್ಯಮ ನಿರ್ದೇಶಕರು ನಿರ್ಧರಿಸುವುದು. |
| 2 | ಅರ್ಜಿ ವಿತರಣೆ | |
| 3 | ಅರ್ಜಿ ಸ್ವೀಕರಿಸುವುದು | |
| 4 | ಸ್ವೀಕರಿಸಿದ ಅರ್ಜಿಗಳ ಪರಿಶೀಲನೆ | |
| 5 | ಪರಿಶೀಲಿಸಿದ ಅರ್ಜಿಗಳ ಪಟ್ಟಿಯನ್ನು ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ ಸಭೆ ಕರೆದು ಸಮಿತಿಯ ಮುಂದೆ ಮಂಡಿಸಿ ಫಲಾನುಭವಿಗಳನ್ನು ಆಯ್ಕೆ ಮಾಡುವುದು | |
| 6 | ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ಹಾಗೂ ಆಕ್ಷೇಪಣೆ ಆಹ್ವಾನ | |
| 7 | ಸ್ವೀಕರಿಸಿದ ಆಕ್ಷೇಪಣೆಗಳ ಇತ್ಯರ್ಥಪಡಿಸುವುದು. | |

| ಕ್ರ. ಸಂ. | ಪ್ರಕ್ರಿಯೆ | ದಿನಾಂಕ |
|---|---|---|
| 8 | ಅಂತಿಮ ಫಲಾನುಭವಿಗಳ ಆಯ್ಕೆ ಪಟ್ಟಿ ಪ್ರಕಟಣೆ | ಪ್ರವಾಸೋದ್ಯಮ ನಿರ್ದೇಶಕರು ನಿರ್ಧರಿಸುವುದು. |
| 9 | ಫಲಾನುಭವಿಗಳ ಪಟ್ಟಿಯನ್ನು ಬ್ಯಾಂಕ್ ಸಾಲ ಒದಗಿಸಲು ಬ್ಯಾಂಕ್‌ಗೆ ಸಲ್ಲಿಸುವುದು | |
| 10 | ಬ್ಯಾಂಕ್ ಸಾಲ ಮಂಜೂರಾದ ನಂತರ ಇಲಾಖೆಯ ಸಹಾಯಧನವನ್ನು ಬ್ಯಾಂಕ್‌ಗೆ ಜಮಾ ಮಾಡುವುದು | |
| 11 | ಪ್ರವಾಸಿ ಟ್ಯಾಕ್ಸಿ ವಿತರಣೆ | |
| 12 | ಪ್ರವಾಸಿ ಟ್ಯಾಕ್ಸಿ ವಿತರಣೆ ಮಾಡಿರುವ ಬಗ್ಗೆ ಇಲಾಖೆಗೆ ವರದಿ ಸಲ್ಲಿಸಲು ಕೊನೆಯ ದಿನ | |

**ಆಯ್ಕೆ ಸಮಿತಿ :**

**ಫಲಾನುಭವಿಗಳ ಅರ್ಹತಾ ಪಟ್ಟಿ ಆಯ್ಕೆ ಮಾಡುವ ಸಮಿತಿ:**

ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸುವುದು:

1.ಉಪ ವಿಭಾಗಾಧಿಕಾರಿಗಳು- ಅಧ್ಯಕ್ಷರು.

2.ತಹಶೀಲ್ದಾರ್ (ಆಯಾ ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವವರು).

3.ಉಪ ನಿರ್ದೇಶಕರು/ಸಹಾಯಕ ನಿರ್ದೇಶಕರು-ಸದಸ್ಯ ಕಾರ್ಯದರ್ಶಿಗಳು.

4.ಜಿಲ್ಲಾ ಅಲ್ಪಸಂಖ್ಯಾತರ ಕಲ್ಯಾಣ ಅಭಿವೃದ್ಧಿ ಅಧಿಕಾರಿ, -ಸದಸ್ಯರು.

5.ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿ (ಡಿ.ಬಿ.ಸಿ.ಸಿ) - ಸದಸ್ಯರು

6.ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಧಿಕಾರಿ (ಬೆಂಗಳೂರು ನಗರಕ್ಕೆ ಸಂಬಂಧಿಸಿದಂತೆ)-ಸದಸ್ಯರು

7.ಪ್ರಾದೇಶಿಕ ಸಾರಿಗೆ ಅಧಿಕಾರಿ - ಸದಸ್ಯರು.

8.ವ್ಯವಸ್ಥಾಪಕರು, ಲೀಡ್ ಬ್ಯಾಂಕ್ - ಸದಸ್ಯರು.

**ಆಯ್ಕೆ ವಿಧಾನ :**

- **ಫಲಾನುಭವಿಗಳ ಆಯ್ಕೆಯಲ್ಲಿ ಅಭ್ಯರ್ಥಿಯ ವಯಸ್ಸು ಹಾಗೂ ಎಸ್.ಎಸ್.ಎಲ್.ಸಿ ಪಡೆದ ಅಂಕದ ಶೇಕಡ (%) ಎರಡರ ಆಧಾರದ ಮೇಲೆ ಕ್ರಮವಾಗಿ 60 ಮತ್ತು 40 ಆದ್ಯತೆಯನ್ನು ನೀಡಿ ಈ ಕೆಳಕಂಡ ಮಾನದಂಡಗಳ ಮೂಲಕ ಆಯ್ಕೆ ಮಾಡುವುದು.**

1. **ಅಭ್ಯರ್ಥಿಯ ವಯಸ್ಸಿನ ಜೇಷ್ಟತೆ ಮೇರೆಗೆ: -**

ಸೂತ್ರ = $\dfrac{\text{ಅಭ್ಯರ್ಥಿ ವಯಸ್ಸು X 100}}{\text{ನಿಗದಿಪಡಿಸಿದ ವಯಸ್ಸು (40)}}$

= $\dfrac{\text{ಬರುವ ಫಲಿತಾಂಶ X 60}}{100}$ = **ಅಭ್ಯರ್ಥಿಯ ವಯಸ್ಸಿನ ಜೇಷ್ಟತೆ ಮೇರೆಗೆ ಪಡೆದ ಫಲಿತಾಂಶ** (A)

2. ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತೆ ಮೇರೆಗೆ:-

ಸೂತ್ರ = ಎಸ್.ಎಸ್.ಎಲ್.ಸಿ ಯಲ್ಲಿ ಅಭ್ಯರ್ಥಿಯು ಪಡೆದ ಒಟ್ಟು ಅಂಕಗಳ ಶೇಕಡ X 100 / ನಿಗದಿಪಡಿಸಿರುವ ಅಂಕದ ಮಿತಿ(45%)

= ಬರುವ ಫಲಿತಾಂಶ X 40 / 100 = ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತೆ ಮೇರೆಗೆ ಪಡೆದ ಫಲಿತಾಂಶ (B)

ಅಭ್ಯರ್ಥಿಯ ವಯಸ್ಸಿನ ಜೇಷ್ಠತೆ ಮೇರೆಗೆ ಪಡೆದ ಫಲಿತಾಂಶ (A) + ಎಸ್.ಎಸ್.ಎಲ್.ಸಿ ಯಲ್ಲಿ ಪಡೆದ ಅಂಕಗಳ ಜೇಷ್ಠತೆ ಮೇರೆಗೆ ಪಡೆದ ಫಲಿತಾಂಶ (B) = ಅಭ್ಯರ್ಥಿ ಪಡೆಯುವ ಒಟ್ಟು ಶೇಕಡವಾರು ಫಲಿತಾಂಶ.

ಅಭ್ಯರ್ಥಿಯು ಪಡೆಯುವ ಒಟ್ಟು ಶೇಕಡವಾರು ಫಲಿತಾಂಶದ ಏರಿಕೆಯಿಂದ ಇಳಿಕೆ ಕ್ರಮದಲ್ಲಿ (Descending Order) ಬರುವ ಶೇಕಡವಾರು ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡತಕ್ಕದ್ದು.

3. ಮಹಿಳೆಯರಿಗೆ ಶೇ. 10% ರಷ್ಟು ಗುರಿಗಳನ್ನು ಮೀಸಲಿರಿಸುವುದು. ಮಹಿಳಾ ಅಭ್ಯರ್ಥಿಗಳು ಅರ್ಜಿ ಸಲ್ಲಿಸದೇ ಇದ್ದಲ್ಲಿ, ಪುರುಷ ಅಭ್ಯರ್ಥಿಗಳಿಗೆ ಸದರಿ ಗುರಿಗಳನ್ನು ಹಂಚಿಕೆ ಮಾಡತಕ್ಕದ್ದು.

**ಫಲಾನುಭವಿಗಳ ಆಯ್ಕೆಯಲ್ಲಿ ಆದ್ಯತೆ ನೀಡಬೇಕಾದ ಅಂಶಗಳು:**

- ನಿಯಮ ರೀತ್ಯ ಮಹಿಳೆಯರು ಅರ್ಜಿ ಸಲ್ಲಿಸಿದ್ದಲ್ಲಿ ಆದ್ಯತೆ ನೀಡಬಹುದಾಗಿದೆ.
- ಬಿ.ಪಿ.ಎಲ್. ರೇಖೆಗಿಂತ ಕೆಳಗಿರುವವರಿಗೆ ಆದ್ಯತೆ ನೀಡತಕ್ಕದ್ದು.
- ಅಭ್ಯರ್ಥಿಯ ಕುಟುಂಬದಲ್ಲಿ ಯಾವ ಒಬ್ಬ ಸದಸ್ಯನು ಸರ್ಕಾರಿ ನೌಕರಿ ಹೊಂದಿಲ್ಲದೆ ಇರುವುದನ್ನು ಖಚಿತಪಡಿಸಿಕೊಳ್ಳಬೇಕು.
- ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರೆ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ, ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ.

**ವಾಹನ ಸಾಲ ಮೇಳ:**

- ಪ್ರವಾಸಿ ಟ್ಯಾಕ್ಸಿ ಖರೀದಿಸಲು ಎಲ್ಲಾ ಜಿಲ್ಲೆಯಲ್ಲಿಯೂ ಫಲಾನುಭವಿಗಳಿಗೆ ಸೂಕ್ತವಾದ ಬ್ಯಾಂಕ್ ಸಾಲ ದೊರಕುವಂತೆ ಮಾಡಲು ಲೀಡ್ ಬ್ಯಾಂಕ್ ವ್ಯವಸ್ಥಾಪಕರೊಂದಿಗೆ ಹಾಗೂ ವಿವಿಧ ವಾಹನ ಏಜೆನ್ಸಿಯವರೊಂದಿಗೆ ವಾಹನ ಸಾಲ ಮೇಳ ಜರುಗಿಸಿ ಸ್ಥಳದಲ್ಲಿ ಸಾಲ ಮಂಜೂರಿಸಿದ ಬ್ಯಾಂಕ್‌ಗಳಿಗೆ ಮಂಜೂರಾತಿ ಅನುಪಾತಕ್ಕೆ ಅನುಗುಣವಾಗಿ ಸಹಾಯಧನ ವಿತರಿಸುವುದು.

**ಅರ್ಜಿದಾರರು ಹೊಂದಿರಬೇಕಾದ ಅರ್ಹತೆಗಳು :**

ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ಖರೀದಿಸುವ ಯೋಜನೆಯ ಪ್ರಯೋಜನ ಪಡೆಯಲು ಅರ್ಜಿ ಸಲ್ಲಿಸಲು ಅರ್ಜಿದಾರರ ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

ಅ) ಅರ್ಜಿದಾರರು ಹಿಂದುಳಿದ ಅಥವಾ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಸೇರಿದವರಾಗಿರಬೇಕು.

ಆ) ಅರ್ಜಿದಾರರ ವಯಸ್ಸು 20 ರಿಂದ 40 ವರ್ಷದೊಳಗಿರಬೇಕು.

ಇ) ಅರ್ಜಿದಾರರು 10ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು.

.....4

ಈ) ಅಭ್ಯರ್ಥಿಗಳು ಲಘು ವಾಹನ ಚಾಲನಾ ಪರವಾನಗಿ ಪಡೆದು ಕನಿಷ್ಠ ಒಂದು ವರ್ಷವಾಗಿರಬೇಕು. ಅಭ್ಯರ್ಥಿಗಳು ವಾಹನ ಪರವಾನಗಿಯೊಂದಿಗೆ ಬ್ಯಾಡ್ಜ್‌ನ್ನು ಹೊಂದಿರತಕ್ಕದ್ದು.

ಉ) ನಗರ ಪ್ರದೇಶದ ಫಲಾನುಭವಿಗಳ ವಾರ್ಷಿಕ ಆದಾಯ ರೂ.55,000/- ಗಳು ಮೀರಬಾರದು.

ಊ) ಗ್ರಾಮಾಂತರ ಪ್ರದೇಶದ ಫಲಾನುಭವಿಗಳ ವಾರ್ಷಿಕ ಆದಾಯ ರೂ.40,000/-ಗಳು ಮೀರಬಾರದು.

ಋ) ಅರ್ಜಿದಾರರು ಯಾವ ಜಿಲ್ಲೆಯ ನಿವಾಸಿಯಾಗಿರುತ್ತಾರೋ ಅದೇ ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸಬೇಕು.

ಎ) ಅರ್ಜಿದಾರರು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಅಥವಾ ನಿಗಮ ಮಂಡಳಿಗಳಲ್ಲಿ ಖಾಯಂ ನೌಕರಿಯಲ್ಲಿರಬಾರದು.

ಏ) ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರೆ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ, ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ.

**<u>ಅರ್ಜಿದಾರರು ಸಲ್ಲಿಸಬೇಕಾದ ದಾಖಲೆಗಳು :</u>**

ಅ) ಜಿಲ್ಲಾಧಿಕಾರಿಗಳಿಂದ ಜಾಹೀರಾತು ಪ್ರಕಟಣೆಗೊಂಡ 30 ದಿನಗಳ ಒಳಗಾಗಿ ನಿಗದಿಪಡಿಸಿದ ಅರ್ಜಿ ನಮೂನೆಯನ್ನು ಭರ್ತಿ ಮಾಡಿ ಇತ್ತೀಚಿನ ಭಾವಚಿತ್ರದೊಂದಿಗೆ ದ್ವಿಪ್ರತಿಯಲ್ಲಿ ಸಲ್ಲಿಸಬೇಕು.

ಆ) ಪಡಿತರ ಚೀಟಿ ಹಾಗೂ ಆಧಾರ್ ಕಾರ್ಡ್‌ನ ಪ್ರತಿಗಳನ್ನು ಸಲ್ಲಿಸುವುದು ಕಡ್ಡಾಯವಾಗಿರುತ್ತದೆ.

ಇ) ಹಿಂದುಳಿದ ಅಥವಾ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿರುವ ಬಗ್ಗೆ ತಹಶೀಲ್ದಾರರಿಂದ ಪಡೆದುಕೊಂಡಿರುವ ಚಾಲ್ತಿಯಲ್ಲಿರುವ ಜಾತಿ ಪ್ರಮಾಣ ಪತ್ರದ ಪ್ರತಿ.

ಈ) ತಹಶೀಲ್ದಾರರಿಂದ ಪಡೆದುಕೊಂಡಿರುವ ಚಾಲ್ತಿಯಲ್ಲಿರುವ ಆದಾಯದ ಪ್ರಮಾಣ ಪತ್ರದ ಪ್ರತಿ.

ಉ) ತಹಶೀಲ್ದಾರ್/ಮಹಾನಗರ ಪಾಲಿಕೆ/ನಗರ ಪಾಲಿಕೆ/ನಗರಸಭೆ/ಪುರಸಭೆ/ಗ್ರಾಮ ಪಂಚಾಯ್ತಿ /ಪಟ್ಟಣ ಪಂಚಾಯ್ತಿ-ಗಳಿಂದ ಪಡೆದಿರುವ ವಾಸಸ್ಥಳ ದೃಢೀಕರಣ ಪತ್ರದ ಪ್ರತಿ.

ಊ) ಖಾಯಂ ಲಘು ವಾಹನ ಚಾಲನಾ ಪರವಾನಗಿ ಪತ್ರ ಹಾಗೂ ಆರ್.ಟಿ.ಓ. ರವರಿಂದ ಪಡೆದಿರುವ ಡಿ.ಎಲ್. ಎಕ್ಸ್‌ಟ್ರಾಕ್ಟ್‌ಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

ಋ) ವಿದ್ಯಾರ್ಹತೆಯ ಬಗ್ಗೆ ಕನಿಷ್ಠ ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣರಾಗಿರುವ ಅಂಕಪಟ್ಟಿಯ ಪ್ರತಿ.

ಎ) ಅರ್ಜಿದಾರನು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಅಥವಾ ನಿಗಮ ಮಂಡಳಿಗಳಲ್ಲಿ ಖಾಯಂ ನೌಕರಿಯಲ್ಲಿರದ ಬಗ್ಗೆ, ಅಭ್ಯರ್ಥಿಯ ಕುಟುಂಬದಲ್ಲಿ ಯಾವ ಒಬ್ಬ ಸದಸ್ಯನು ಸರ್ಕಾರಿ ನೌಕರಿ ಹೊಂದಿಲ್ಲದ ಬಗ್ಗೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ/ನಗರಸಭೆ/ಪುರಸಭೆ/ಪಟ್ಟಣ ಪಂಚಾಯ್ತಿ /ಗ್ರಾಮ ಪಂಚಾಯ್ತಿ-ಇವುಗಳಿಂದ ಸ್ವಉದ್ಯೋಗ ಕಲ್ಪಿಸಿಕೊಳ್ಳುವ ಸೌಲಭ್ಯ ಪಡೆಯದೇ ಇರುವ ಬಗ್ಗೆ, ಕುಟುಂಬದ ಯಾವ ಸದಸ್ಯನು ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿಲ್ಲ ಎಂಬ ಬಗ್ಗೆ ಹಾಗೂ ಸ್ವಯಂ ಪ್ರಮಾಣೀಕರಿಸಿ. ರೂ.50/-ರ ಬೆಲೆಯ ಛಾಪಾ ಕಾಗದ (Affidavit)ದಲ್ಲಿ ನಮೂನೆ -3 ರಲ್ಲಿ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು.

ಏ) ಈಗಾಗಲೇ ಕುಟುಂಬದ ಸದಸ್ಯನೊಬ್ಬನು ಇಲಾಖೆಯಿಂದ ಪ್ರವಾಸಿ ಟ್ಯಾಕ್ಸಿ ಪಡೆದಿದ್ದರೆ ಅದೇ ಕುಟುಂಬದ ಮತ್ತೊಬ್ಬ ಸದಸ್ಯನಿಗೆ ಈ ಅವಕಾಶ ನೀಡಬಾರದು. ಕುಟುಂಬದ ಸದಸ್ಯನು ವಿವಾಹವಾಗಿ ಪ್ರತ್ಯೇಕವಾಗಿ ವಾಸವಿದ್ದಲ್ಲಿ, ಅರ್ಜಿ ಸಲ್ಲಿಸಲು ಅವಕಾಶ ನೀಡಬಹುದಾಗಿದೆ. ಈ ಸಂಬಂಧ ಅಭ್ಯರ್ಥಿಯಿಂದ ಪಡಿತರ ಚೀಟಿಯನ್ನು ಆಧಾರವಾಗಿ ಪಡೆಯತಕ್ಕದ್ದು.

ಐ) ಅರ್ಜಿಯಲ್ಲಿ ಅಭ್ಯರ್ಥಿಗಳ ದೂರವಾಣಿ ಸಂಖ್ಯೆಗಳನ್ನು ನಮೂದಿಸುವುದು ಕಡ್ಡಾಯ.

ಒ) ಆಯ್ಕೆಯಾದ ನಂತರ ಅಭ್ಯರ್ಥಿಗಳ ವಿರುದ್ಧ ಯಾವುದೇ ಕ್ರಿಮಿನಲ್ ಮೊಕದ್ದಮೆ ಇಲ್ಲದೇ ಇರುವ ಬಗ್ಗೆ ಆಯಾ ವ್ಯಾಪ್ತಿಯ ಪೊಲೀಸ್ ಠಾಣೆಯಿಂದ ಪೊಲೀಸ್ ನಿರಾಕ್ಷೇಪಣಾ ಪತ್ರವನ್ನು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಪಡೆಯುವುದು.

ಓ) ಅರ್ಜಿದಾರನು ಮೇಲಿನ ಎಲ್ಲಾ ದಾಖಲಾತಿಗಳನ್ನು ಸ್ವಯಂ ದೃಢೀಕರಿಸಿ ಸಲ್ಲಿಸತಕ್ಕದ್ದು.

ಔ) ಆಯ್ಕೆಯಾದ ಅಭ್ಯರ್ಥಿಗಳಿಂದ ತಮಗೆ ವಿತರಿಸುವ ಪ್ರವಾಸಿ ವಾಹನವನ್ನು ಯಾರಿಗೂ ಪರಬಾರೆ ಮಾಡುವುದಿಲ್ಲವೆಂದು ನೋಟರಿಯಿಂದ ಪ್ರಮಾಣೀಕರಿಸಿ ರೂ.50/-ರ ಬೆಲೆಯ ಛಾಪಾ ಕಾಗದ (Affidavit)ದಲ್ಲಿ ಮುಚ್ಚಳಿಕೆ ಪಡೆಯತಕ್ಕದ್ದು.

.....5

**ಷರತ್ತುಗಳು :**

ಅ) ಫಲಾನುಭವಿಯೇ ಸ್ವತಃ ಟ್ಯಾಕ್ಸಿಯನ್ನು ಓಡಿಸಬೇಕು ಹೊರತು ಬೇರೆಯವರಿಗೆ ಪರಬಾರೆ ಮಾಡುವಂತಿಲ್ಲ. ಒಂದು ವೇಳೆ ಪರಭಾರೆ ಮಾಡಿರುವುದು ಕಂಡುಬಂದಲ್ಲಿ ಟ್ಯಾಕ್ಸಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಈ ಬಗ್ಗೆ ಜಿಲ್ಲಾಧಿಕಾರಿಗಳು ಆರ್.ಟಿ.ಒ.ಗಳಿಗೆ ಪತ್ರ ಮುಖೇನ ತಿಳಿಸುವುದು. ಸದರಿ ವಾಹನವನ್ನು (05) ವರ್ಷಗಳವರೆಗೆ ಬೇರೆಯವರಿಗೆ ವರ್ಗಾವಣೆ ಮಾಡದಂತೆ ಕ್ರಮವಹಿಸುವುದು.

ಆ) ಪ್ರತಿ ವರ್ಷ ಫಲಾನುಭವಿಯು ಗಳಿಸಿದ ಆದಾಯದ ವಿವರಗಳನ್ನು ಜಿಲ್ಲಾ ಮಟ್ಟದ ಇಲಾಖೆಯ ಕಛೇರಿಗೆ ನೀಡುವುದು.

ಇ) ಫಲಾನುಭವಿಯು ತೆಗೆದುಕೊಳ್ಳುವ ಬ್ಯಾಂಕಿನ ಸಾಲದ ಮೊತ್ತವನ್ನು ನಿರಂತರವಾಗಿ ಮರುಪಾವತಿ ಮಾಡುವುದು.

ಈ) ಫಲಾನುಭವಿಗಳಿಗೆ ವಿತರಿಸುವ ಪ್ರವಾಸಿ ಟ್ಯಾಕ್ಸಿಯನ್ನು ಸಾಲ ಮಂಜೂರಾತಿ ಮಾಡಿದ ಬ್ಯಾಂಕ್ ಹೆಸರಿಗೆ ಅಡಮಾನಿಕೆ (Hypothecation) ಮಾಡಿಕೊಳ್ಳತಕ್ಕದ್ದು. ಈ ಬಗ್ಗೆ ಸಂಬಂಧಪಟ್ಟ ಅಧೀನ ಕಛೇರಿಯ ಪ್ರವಾಸೋದ್ಯಮ ಇಲಾಖೆಯ ಅಧಿಕಾರಿಗಳು ಅಗತ್ಯ ಕ್ರಮ ವಹಿಸತಕ್ಕದ್ದು.

ಉ) ಫಲಾನುಭವಿಗಳು ಪ್ರವಾಸಿಗರೊಡನೆ ಉತ್ತಮ ನಡವಳಿಕೆಯಿಂದ ವರ್ತಿಸುವುದು. ಕನ್ನಡ ಭಾಷಾ ಜ್ಞಾನ ಹಾಗೂ ಇತರೆ ಭಾಷೆಗಳ ಪರಿಣಿತಿ, ಪ್ರವಾಸಿ ಸ್ಥಳಗಳ ಪರಿಚಯ ಮುಂತಾದ ವಿಷಯಗಳ ಬಗ್ಗೆ ಸಾಮಾನ್ಯ ಜ್ಞಾನ ಹೊಂದಿದ್ದರೆ ಅನುಕೂಲವಾಗುವುದು.

**ಬ್ರಾಂಡಿಂಗ್ :**

- ಫಲಾನುಭವಿಯು ಸ್ವ-ಇಚ್ಛೆಯಿಂದ ಯಾವುದೇ ಮಾದರಿಯ ವಾಹನವನ್ನು ಖರೀದಿಸಬಹುದು. ವಾಹನದ ಮೇಲೆ ಪ್ರವಾಸೋದ್ಯಮ ಇಲಾಖೆಯ ಲೋಗೋ, "ಪ್ರವಾಸೋದ್ಯಮ ಇಲಾಖೆ ನೆರವು" ಎಂದು ವಾಹನಗಳ ಮೇಲೆ ಚಿತ್ರಿಸತಕ್ಕದ್ದು ಹಾಗೂ ಬ್ರಾಂಡಿಂಗ್ ಬಗ್ಗೆ ಸರ್ಕಾರ ಮುಂದೆ ಯಾವುದೇ ಆದೇಶ ಹೊರಡಿಸಿದ್ದಲ್ಲಿ ಅದನ್ನು ಪಾಲಿಸತಕ್ಕದ್ದು.

**ಅಧೀನ ಕಛೇರಿಗಳ ಜವಾಬ್ದಾರಿಗಳು :**

- ಪ್ರವಾಸಿ ಟ್ಯಾಕ್ಸಿ ವಿತರಣೆ ಪ್ರಕ್ರಿಯೆಗೆ ಸಂಬಂಧಿಸಿದಂತೆ ಪ್ರಕ್ರಿಯೆ ಕೈಗೊಂಡ ಬಗ್ಗೆ ಪ್ರತಿ ಮಾಹೆ ನಿಗಧಿತ ನಮೂನೆ-1 ರಲ್ಲಿ ಜಿಲ್ಲಾಧಿಕಾರಿಗಳಿಗೆ ಹಾಗೂ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆಗೆ ಕಡ್ಡಾಯವಾಗಿ ಮೂಲಕ ವರದಿ ಸಲ್ಲಿಸುವುದು.
- ಆಯ್ಕೆಯಾದ ಫಲಾನುಭವಿಗಳ ಪಟ್ಟಿ (Soft and Hard Copy) ಯನ್ನು ನಿಗಧಿತ ನಮೂನೆ-2 ರಲ್ಲಿ ಕೇಂದ್ರ ಕಛೇರಿ ತಪ್ಪದೇ ಸಲ್ಲಿಸುವುದು.

(ಬಿ.ಎನ್. ಯತಿರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ.



**ಕರ್ನಾಟಕ ಸರ್ಕಾರ**

ಸಂಖ್ಯೆ: ಪ್ರಇ 47 ಪ್ರವಾಯೋ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:06.02.2017

## ತಿದ್ದುಪಡಿ ಆದೇಶ

2016-17ನೇ ಸಾಲಿನಲ್ಲಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಸಹಾಯಧನದೊಂದಿಗೆ ಪ್ರವಾಸಿ ಟ್ಯಾಕ್ಸಿ ವಿತರಿಸಲು ಮಂಜೂರಾತಿ ನೀಡಿ ಹೊರಡಿಸಲಾಗಿರುವ ಆದೇಶ ಸಂಖ್ಯೆ:ಪ್ರಇ 297 ಪ್ರವಾಯೋ 2016, ದಿನಾಂಕ:02.11.2016ರ ಅನುಬಂಧ-1ರಲ್ಲಿನ ಆಯ್ಕೆ ವಿಧಾನದ ಕ್ರಮ ಸಂಖ್ಯೆ:3ರಲ್ಲಿ "ಮಹಿಳೆಯರಿಗೆ ಶೇ.10ರಷ್ಟು ಗುರಿಗಳನ್ನು ಮೀಸಲಿರಿಸುವುದು" ಎಂಬುದರ ಬದಲಿಗೆ "ಮಹಿಳೆಯರಿಗೆ ಶೇ.15ರಷ್ಟು ಗುರಿಗಳನ್ನು ಮೀಸಲಿರಿಸುವುದು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

[ಜಿ.ಎನ್.ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ.

ಇವರಿಗೆ,

1. ಮಹಾಲೇಖಪಾಲರು (ಲೆಕ್ಕ ಪತ್ರ /ಲೆಕ್ಕ ಪರಿಶೋಧನೆ) ಕರ್ನಾಟಕ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.
3. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
4. ಎಲ್ಲಾ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ.
5. ಜಂಟಿ ನಿರ್ದೇಶಕರು, ರಾಜ್ಯ ಹುಜೂರು ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು-01.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿ:

1. ಮಾನ್ಯ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ಪ್ರವಾಸೋದ್ಯಮ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ.
2. ಮಾನ್ಯ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿ.

# ಅನುಬಂಧ-3

**ವಿಷಯ:** ಜಿಲ್ಲಾ ಮಟ್ಟದ ಪ್ರವಾಸೋದ್ಯಮ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ವಾಪ್ರಯ 52 ಪ್ರವಾಇ 1997, ದಿನಾಂಕ: 25-6-1997.

2. ಸರ್ಕಾರಿ ಆದೇಶ ಸಂಖ್ಯೆ:ವಾಪ್ರಯ 152 ಪ್ರವಾಇ 2003, ದಿನಾಂಕ: 05-11-2003.

3. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ಇವರ ಕಡತ ಸಂಖ್ಯೆ: ಪ್ರಇ/ಯೋ-1/19/2013-14.

* * *

**ಪ್ರಸ್ತಾವನೆ:-**

ಮೇಲಿನ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪ್ರವಾಸೋದ್ಯಮಕ್ಕೆ ಸಂಬಂಧಿಸಿದಂತೆ ಯೋಜನೆಗಳ ಮೇಲ್ವಿಚಾರಣೆ ಮತ್ತು ಉಸ್ತುವಾರಿಗಾಗಿ ರಾಜ್ಯದ ಪ್ರತಿಯೊಂದು ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಪ್ರವಾಸೋದ್ಯಮ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿತ್ತು. ಮೇಲಿನ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಸಮಿತಿಯನ್ನು ಪುನರ್ ರಚಿಸಲಾಗಿತ್ತು.

ಹಾಲಿ ಚಾಲ್ತಿಯಲ್ಲಿರುವ ಜಿಲ್ಲಾ ಮಟ್ಟದ ಪ್ರವಾಸೋದ್ಯಮ ಸಮಿತಿಗೆ ಹೆಚ್ಚಿನ ಪ್ರವಾಸೋದ್ಯಮ ಪಾಲುದಾರರನ್ನು ಸೇರಿಸಿ ಸಮಿತಿಯನ್ನು ಪುನ: ಪುನರ್ ರಚಿಸಿ ಆದೇಶ ಹೊರಡಿಸುವಂತೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಕಡತದಲ್ಲಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ರವರು ಕೋರಿರುತ್ತಾರೆ.

ಆದ್ದರಿಂದ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಪ್ರಇ 226 ಪ್ರವಾಇ 2013**
**ಬೆಂಗಳೂರು, ದಿನಾಂಕ:16ನೇ ನವೆಂಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಪ್ರವಾಸೋದ್ಯಮ ಇಲಾಖೆಗೆ ಸಂಬಂಧಿಸಿದ ಯೋಜನೆ ಮತ್ತು ಕಾರ್ಯಕ್ರಮಗಳ ಮೇಲ್ವಿಚಾರಣೆ ಮತ್ತು ಉಸ್ತುವಾರಿಗಾಗಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಈ ಕೆಳಕಂಡ ಸದಸ್ಯರನ್ನೊಳಗೊಂಡ ಜಿಲ್ಲಾ ಮಟ್ಟದ ಪ್ರವಾಸೋದ್ಯಮ ಸಮಿತಿಯನ್ನು ಪುನ: ಪುನರ್ ರಚಿಸಿ ಆದೇಶಿಸಿದೆ.

| | | | |
|---|---|---|---|
| 1. | ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು | - | ಅಧ್ಯಕ್ಷರು |
| 2. | ಜಿಲ್ಲೆಗೆ ಸಂಬಂಧಿಸಿದ ಲೋಕಸಭಾ ಸದಸ್ಯರುಗಳು, ವಿಧಾನ ಸಭಾ ಸದಸ್ಯರುಗಳು ಮತ್ತು ವಿಧಾನ ಪರಿಷತ್ ಸದಸ್ಯರುಗಳು | - | ಸದಸ್ಯರು |
| 3. | ಜಿಲ್ಲಾ ಪಂಚಾಯತ್ ಅಧ್ಯಕ್ಷರುಗಳು | - | ಸದಸ್ಯರು |
| 4. | ಮಹಾನಗರ ಪಾಲಿಕೆಗಳು/ನಗರ ಪಾಲಿಕೆಗಳು/ಪುರಸಭೆಗಳು/ ತಾಲ್ಲೂಕು ಪಂಚಾಯತ್‌ಗಳ ಅಧ್ಯಕ್ಷರುಗಳು | - | ಸದಸ್ಯರು |
| 5. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು ಮಹಾನಗರ ಪಾಲಿಕೆಯ ಆಯುಕ್ತರುಗಳು/ನಗರ ಪಾಲಿಕೆಯ ಪೌರಾಯುಕ್ತರು/ಪುರಸಭೆಗಳ ಮುಖ್ಯಾಧಿಕಾರಿಗಳು | - | ಸದಸ್ಯರು |
| 6. | ಪೊಲೀಸ್ ಆಯುಕ್ತರು/ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು | - | ಸದಸ್ಯರು |
| 7. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು | - | ಸದಸ್ಯರು |

2/...

8. ಜಿಲ್ಲಾ ಆರೋಗ್ಯ ಅಧಿಕಾರಿಗಳು – ಸದಸ್ಯರು

9. ಪರಿಸರ ಪ್ರವಾಸೋದ್ಯಮ ಮಂಡಳಿಯ ಪ್ರತಿನಿಧಿ [ಎಕೋ ಟೂರಿಸಂ ಬೋರ್ಡ್] – ಸದಸ್ಯರು

10. ಕೆಳಕಂಡ ಪಾಲುದಾರ ಸಂಸ್ಥೆಗಳ [Stake holders] ಮುಖ್ಯಸ್ಥರು/ಅಧ್ಯಕ್ಷರು – ಸದಸ್ಯರು

(1) ಟೂರ್ಸ್ ಅಂಡ್ ಟ್ರಾವೆಲ್ಸ್ ಅಸೋಸಿಯೇಷನ್
(2) ಹೋಟೆಲ್ ಅಸೋಸಿಯೇಷನ್
(3) ಹೋಂ ಸ್ಟೇ ಅಸೋಸಿಯೇಷನ್
(4) ಸ್ಥಳೀಯ ಟ್ರೇಡ್ & ಇಂಡಸ್ಟ್ರಿ ಅಸೋಸಿಯೇಷನ್‌ನ ಪ್ರತಿನಿಧಿ [ಅಧ್ಯಕ್ಷ]
(5) ಸ್ಥಳೀಯ ಛೇಂಬರ್ ಆಫ್ ಕಾಮರ್ಸ್
(6) ಅಡ್ವೆಂಚರ್ ಟೂರಿಸಂ ಅಸೋಸಿಯೇಷನ್

2. ಜಿಲ್ಲಾ ಪ್ರವಾಸೋದ್ಯಮ ಸಮಿತಿಗೆ ಕೆಳಕಂಡ ಜವಾಬ್ದಾರಿ/ಕಾರ್ಯ ಚಟುವಟಿಕೆಗಳನ್ನು ವಹಿಸಲಾಗಿದೆ.

(1) ಜಿಲ್ಲಾ ಮಟ್ಟದ ಪ್ರವಾಸೋದ್ಯಮ ಸಮಿತಿಗೆ ನೀಡಿರುವ ಅನುದಾನವನ್ನು ವಿವೇಚನಾನುಸಾರ ಬಳಕೆ ಮಾಡುವುದು;

(2) ಜಿಲ್ಲೆಯ ಪ್ರವಾಸೋದ್ಯಮ ಯೋಜನೆಗಳನ್ನು ರೂಪಿಸುವುದು;

(3) ಪ್ರವಾಸೋದ್ಯಮ ಯೋಜನೆಗಳ ಮೇಲ್ವಿಚಾರಣೆ ಮತ್ತು ಉಸ್ತುವಾರಿ;

(4) ಜಿಲ್ಲೆಯ ಪ್ರವಾಸಿ ತಾಣಗಳಿಗೆ ಭೇಟಿ ನೀಡುವ ಪ್ರವಾಸಿಗರು, ಪ್ರವಾಸಿ ಸ್ಥಳಗಳು ಹಾಗೂ ಪ್ರವಾಸಿ ಚಟುವಟಿಕೆಗಳ ಸುರಕ್ಷತೆ ಮತ್ತು ರಕ್ಷಣೆ ಬಗ್ಗೆ ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳುವುದು;

(5) ಪ್ರವಾಸಿಗರ ಅನುಕೂಲಕ್ಕಾಗಿ ಅಳವಡಿಸಿರುವ/ಅಳವಡಿಸುವ ಸೈನೇಜ್‌ಗಳು, ಫಲಕಗಳು ಹಾಗೂ ಪ್ರವಾಸಿ ತಾಣಗಳನ್ನು ಸೂಚಿಸುವ ದಿಕ್ಕುಗಳು ಪ್ರವಾಸಿಗರಿಗೆ ಅನುಕೂಲವಾಗಿರುವುದನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳುವುದು;

(6) ಕಂದಾಯ ವಸೂಲಿ ಮತ್ತು ಆಸ್ತಿಗಳ ನಿರ್ವಹಣೆಗೆ ಯಾವುದೇ ಸೊಸೈಟಿ ಅಥವಾ ಸಂಸ್ಥೆಯನ್ನು ಸ್ಥಾಪಿಸಲು ಅಧಿಕಾರ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

[ಮೋಹನ್ ಕೆ.]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ.

ಇವರಿಗೆ,

1. ಮಹಾಲೇಖಪಾಲರು (ಲೆಕ್ಕಪತ್ರ / ಲೆಕ್ಕಪರಿಶೋಧನೆ), ಕರ್ನಾಟಕ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.

4. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು.
5. ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಖನಿಜ ಭವನ, ಬೆಂಗಳೂರು.
6. ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಟಿ.ಡಿ.ಸಿ., ಖನಿಜ ಭವನ, ಬೆಂಗಳೂರು.
7. ವ್ಯವಸ್ಥಾಪಕ ನಿರ್ದೇಶಕರು, ಜೆ.ಎಲ್.ಆರ್., ಖನಿಜ ಭವನ, ಬೆಂಗಳೂರು.
8. ಸಮಿತಿಯ ಎಲ್ಲಾ ಸದಸ್ಯರುಗಳು [ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ಇವರ ಮೂಲಕ]
9. ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ.
10. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ.
11. ಸರ್ಕಾರದ ಜಂಟಿ ಕಾರ್ಯದರ್ಶಿಯವರ ಆಪ್ತ ಸಹಾಯಕಿ, ಪ್ರವಾಸೋದ್ಯಮ ಇಲಾಖೆ.
12. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು.



**ಕರ್ನಾಟಕ ಸರ್ಕಾರ**

ಸಂಖ್ಯೆ:ಪ್ರಇ 26 ಪ್ರವಾವಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ
ಬೆಂಗಳೂರು ದಿನಾಂಕ: 2/.02.2018

Stored
15/02/19

ಇವರಿಂದ,

ಸರ್ಕಾರದ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ
ವಿಕಾಸ ಸೌಧ, ಬೆಂಗಳೂರು.

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ________________ ________ರವರು ಮಂಡಿಸಿರುವ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ:___921___ಕ್ಕೆ ಉತ್ತರ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ:___921___ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

[ಬಿ.ಎನ್.ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 521
**ಮಾನ್ಯ ಸದಸ್ಯರ ಹೆಸರು** : ಡಾ|| ರಂಗನಾಥ್ ಹೆಚ್.ಡಿ. (ಕುಣಿಗಲ್)
**ವಿಷಯ** : ಕಾಮಗಾರಿಗಳ ವಿವರ.
**ಉತ್ತರಿಸುವ ದಿನಾಂಕ** : 15.02.2019
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕುಣಿಗಲ್ ತಾಲ್ಲೂಕಿಗೆ 2015-16 ರಿಂದ 2017-18ನೇ ಸಾಲಿನವರೆಗೆ ಪ್ರವಾಸೋದ್ಯಮ ಇಲಾಖೆಯಿಂದ ಯಾವ ಯಾವ ಯೋಜನೆಯಡಿ ಎಷ್ಟೆಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಕುಣಿಗಲ್ ತಾಲ್ಲೂಕಿಗೆ 2015-16ನೇ ಸಾಲಿನಿಂದ 2017-18ನೇ ಸಾಲಿನವರೆಗೆ ಪ್ರವಾಸೋದ್ಯಮ ಇಲಾಖೆಯಿಂದ ವಿವಿಧ ಯೋಜನೆ ಅಡಿ ಕೈಗೊಂಡಿರುವ ಕಾಮಗಾರಿಗಳ ವಿವರ, ಬಿಡುಗಡೆ ಮಾಡಿರುವ ಅನುದಾನದ ವಿವರ ಹಾಗೂ ಕಾಮಗಾರಿಗಳು ಯಾವ ಹಂತದಲ್ಲಿದೆ ಎಂಬುದರ ಮಾಹಿತಿಯನ್ನು **ಅನುಬಂಧದಲ್ಲಿ** ಒದಗಿಸಿದೆ. |
| ಆ) | ಬಿಡುಗಡೆ ಮಾಡಲಾದ ಅನುದಾನದಲ್ಲಿ ಎಷ್ಟು ಕಾಮಗಾರಿಗಳು ಪೂರ್ಣಗೊಂಡಿವೆ, ಎಷ್ಟು ಕಾಮಗಾರಿಗಳು ಪ್ರಗತಿಯಲ್ಲಿವೆ, ಎಷ್ಟು ಕಾಮಗಾರಿಗಳು ಇನ್ನೂ ಚಾಲ್ತಿಯಾಗಿರುವುದಿಲ್ಲ ಇದಕ್ಕೆ ಕಾರಣಗಳೇನು; | |
| ಇ) | ಕುಣಿಗಲ್‌ನ ದೊಡ್ಡಕೆರೆ (ನಗರದಲ್ಲಿರುವ) ಇತಿಹಾಸ ಪ್ರಸಿದ್ಧವಾಗಿರುವುದರಿಂದ ಪ್ರವಾಸೋದ್ಯಮ ಇಲಾಖೆಯಿಂದ ಯಾತ್ರಾ ಸ್ಥಳವನ್ನಾಗಿ ಅಭಿವೃದ್ಧಿಪಡಿಸಲು ಸರ್ಕಾರಕ್ಕೆ ಇರುವ ತೊಂದರೆಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಕುಣಿಗಲ್‌ನ ದೊಡ್ಡಕೆರೆಯು ಕಾವೇರಿ ನೀರಾವರಿ ನಿಗಮದ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಈ ಕೆರೆಯನ್ನು ಅಭಿವೃದ್ಧಿ ಪಡಿಸುವ ಪ್ರಸ್ತಾವನೆ ಇಲಾಖೆಯ ಮುಂದೆ ಇರುವುದಿಲ್ಲ. |

ಪ್ರಇ 26 ಪ್ರವಾವಿ 2019

(ಸಾ.ರಾ.ಮಹೇಶ್) 14/2/19.
ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು

## ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 521 ಕ್ಕೆ ಅನುಬಂಧ

## 2015-16ನೇ ಸಾಲಿನಿಂದ 2017-18ನೇ ಸಾಲಿನವರೆಗೆ ಪ್ರವಾಸೋದ್ಯಮ ಇಲಾಖೆ ವತಿಯಿಂದ ವಿವಿಧ ಯೋಜನೆ ಅಡಿ ಕುಣಿಗಲ್ ತಾಲ್ಲೂಕಿನಲ್ಲಿ ಕೈಗೊಂಡಿರುವ ಕಾಮಗಾರಿಗಳ ವಿವರ

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ಕಾಮಗಾರಿಯ ಹೆಸರು | ಯೋಜನೆಯ ಹೆಸರು | ಮಂಜೂರಾದ ವರ್ಷ | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಬಿಡುಗಡೆ ಮಾಡಿರುವ ಅನುದಾನ | | | | ಬಿಡುಗಡೆ ಮಾಡಿರುವ ಒಟ್ಟು ಮೊತ್ತ | ಕಾಮಗಾರಿಯ ಹಂತ |
|---|---|---|---|---|---|---|---|---|---|---|---|
| | | | | | | 2015-16 | 2016-17 | 2017-18 | 2018-19 | | |
| | ಕುಣಿಗಲ್ ಜಿಲ್ಲೆ | | | | | | | | | | |
| 1 | ಕುಣಿಗಲ್ ಗ್ರಾಮದ ಶ್ರೀ ವೆಂಕಟೇಶ್ವರ ದೇವಾಲಯದ ಬಳಿ ಶೌಚಾಲಯ, ಸಿ.ಸಿ ರಸ್ತೆ ಅಭಿವೃದ್ಧಿ. | ವಿಶೇಷ ಅಭಿವೃದ್ಧಿ ಯೋಜನೆ | 2015-16 | 50.00 | ಕೆ.ಆರ್.ಐ.ಡಿ.ಎಲ್. | 0.00 | 30.00 | 0.00 | 0.00 | 30.00 | ಸಿ.ಸಿ ರಸ್ತೆ ಕಾಮಗಾರಿ ಪೂರ್ಣಗೊಂಡಿದೆ. ಶೌಚಾಲಯ ನಿವೇಶನ ಹಸ್ತಾಂತರಿಸುವ ಕಾರ್ಯ ಪ್ರಗತಿಯಲ್ಲಿದೆ. |
| 2 | ಕುಣಿಗಲ್ ತಾಲ್ಲೂಕಿನಲ್ಲಿರುವ ಹುತ್ರಿದುರ್ಗದಲ್ಲಿ ಯಾತ್ರಿನಿವಾಸ ನಿರ್ಮಾಣ. | ಬಂಡವಾಳ ವೆಚ್ಚ | 2015-16 | 49.70 | ಕೆ.ಆರ್.ಐ.ಡಿ.ಎಲ್. | 49.70 | 0.00 | 0.00 | 0.00 | 49.70 | ಸರ್ಕಾರಿ ಜಮೀನು ದಿನಾಂಕ:05.02.2018 ರಂದು ಪ್ರವಾಸೋದ್ಯಮ ಇಲಾಖೆಗೆ ಮಂಜೂರಾಗಿರುತ್ತದೆ. ಕಾಮಗಾರಿ ಪ್ರಗತಿಯಲ್ಲಿದೆ. |
| 3 | ಕುಣಿಗಲ್ ತಾಲ್ಲೂಕಿನಲ್ಲಿರುವ ಹುತ್ರಿದುರ್ಗದಲ್ಲಿ ರೈಲಿಂಗ್ಸ್ ಮತ್ತು ಮೆಟ್ಟಿಲು ನಿರ್ಮಾಣ. | ಬಂಡವಾಳ ವೆಚ್ಚ | 2015-16 | 100.00 | ಲೋ.ಇಲಾಖೆ | 0.00 | 0.00 | 0.00 | 30.00 | 30.00 | ರೈಲಿಂಗ್ಸ್ ಮತ್ತು ಮೆಟ್ಟಿಲು ನಿರ್ಮಾಣ ಕಾಮಗಾರಿಯನ್ನು 2018-19ನೇ ಸಾಲಿನಲ್ಲಿ ಲೋ.ಇಲಾಖೆಗೆ ವಹಿಸಲಾಗಿದೆ, ಕಾಮಗಾರಿಯ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ, ಕಾಮಗಾರಿ ಪ್ರಾರಂಭಿಸಬೇಕಿದೆ. |

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ಕಾಮಗಾರಿಯ ಹೆಸರು | ಯೋಜನೆಯ ಹೆಸರು | ಮಂಜೂರಾದ ವರ್ಷ | ಅಂದಾಜು ಮೊತ್ತ | ಅನುಷ್ಠಾನ ಸಂಸ್ಥೆ | ಬಿಡುಗಡೆ ಮಾಡಿರುವ ಅನುದಾನ | | | | ಬಿಡುಗಡೆ ಮಾಡಿರುವ ಒಟ್ಟು ಮೊತ್ತ | ಕಾಮಗಾರಿಯ ಹಂತ |
|---|---|---|---|---|---|---|---|---|---|---|---|
| | | | | | | 2015-16 | 2016-17 | 2017-18 | 2018-19 | | |
| 4 | ಕುಣಿಗಲ್ ತಾಲ್ಲೂಕು, ಅಮೃತೂರು ಹೋಬಳಿ ಹಂಚೀಪುರ ಗ್ರಾಮದ ಶ್ರೀ ಬೆಟ್ಟದ ತಿಮ್ಮಪ್ಪ ಸ್ವಾಮಿ ದೇವಸ್ಥಾನ ಹತ್ತಿರ ಯಾತ್ರಿನಿವಾಸ ನಿರ್ಮಾಣ. | ಬಂಡವಾಳ ವೆಚ್ಚ | 2015-16 | 49.52 | ನಿರ್ಮಿತಿ ಕೇಂದ್ರ | 25.00 | 0.00 | 0.00 | 0.00 | 25.00 | ನಿವೇಶನ ಕೊರತೆಯಿಂದಾಗಿ ಪ್ರರಂಭಿಸದೇ ಇರುವುದರಿಂದ ಕಾಮಗಾರಿಯನ್ನು ರದ್ದುಗೊಳಿಸಲಾಗಿದೆ |
| 5 | ಕುಣಿಗಲ್ ತಾಲ್ಲೂಕು, ಹುಲಿಯೂರು ದುರ್ಗ ಮತ್ತು ಹಳೇವೂರಿನಲ್ಲಿ ಬರುವ ಹೇಮಗಿರಿ ಬೆಟ್ಟಕ್ಕೆ ಸಾರ್ವಜನಿಕ ಶೌಚಾಲಯ ನಿರ್ಮಾಣ. | ಬಂಡವಾಳ ವೆಚ್ಚ | 2015-16 | 14.78 | ನಿರ್ಮಿತಿ ಕೇಂದ್ರ | 14.78 | 0.00 | 0.00 | 0.00 | 14.78 | ನಿವೇಶನ ಕೊರತೆಯಿಂದಾಗಿ ಪ್ರರಂಭಿಸದೇ ಇರುವುದರಿಂದ ಕಾಮಗಾರಿಯನ್ನು ರದ್ದುಗೊಳಿಸಲಾಗಿದೆ |
| 6 | ಕುಣಿಗಲ್ ತಾಲ್ಲೂಕಿನ ಬೆಂಚಕಲ್ಲು ಗ್ರಾಮ, ಹುಲಿಯೂರು ದುರ್ಗ ಹೋಬಳಿ ಶ್ರೀ ಲಕ್ಷ್ಮೀ ವೆಂಕಟೇಶ್ವರ ಸ್ವಾಮಿ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ. | ಬಂಡವಾಳ ವೆಚ್ಚ | 2017-18 | 50.00 | ಕೆ.ಆರ್.ಐ.ಡಿ.ಎಲ್. | 0.00 | 0.00 | 20.00 | 0.00 | 20.00 | ಅಧ್ಯಕ್ಷರು, ಶ್ರೀ ಲಕ್ಷ್ಮೀ ವೆಂಕಟೇಶ್ವರ ಸ್ವಾಮಿ ದೇವಸ್ಥಾನದ ಯಾತ್ರಿನಿವಾಸ ಕಾಮಗಾರಿಗೆ ನಿವೇಶನವನ್ನು ಹಕ್ಕಿನ ಸಮೇತ ಪ್ರವಾಸೋದ್ಯಮ ಇಲಾಖೆಗೆ 30 ದಿನಗಳ ಕಾಲಾವಕಾಶವನ್ನು ಕೋರಿರುತ್ತಾರೆ. ಆದ್ದರಿಂದ ನಿವೇಶನ ಹಸ್ತಾಂತರ ಕಾರ್ಯ ಪ್ರಗತಿಯಲ್ಲಿದೆ. |
| | **ಒಟ್ಟು ಮೊತ್ತ** | | | **314.00** | | **89.48** | **30.00** | **20.00** | **30.00** | **169.48** | |



**ಕರ್ನಾಟಕ ಸರ್ಕಾರ**

ಸಂಖ್ಯೆ:ಪ್ರಇ25 ಪ್ರವಾವಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ
ಬೆಂಗಳೂರು ದಿನಾಂಕ: 21.02.2018

Stared
15/02/19

ಇವರಿಂದ,

ಸರ್ಕಾರದ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ
ವಿಕಾಸ ಸೌಧ, ಬೆಂಗಳೂರು.

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ [illegible] ರವರು ಮಂಡಿಸಿರುವ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1092 ಕ್ಕೆ ಉತ್ತರ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1092 ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

[ಬಿ.ಎನ್.ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

## ಕರ್ನಾಟಕ ವಿಧಾನಸಭೆ

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 1092
**ಮಾನ್ಯ ಸದಸ್ಯರ ಹೆಸರು** : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ)
**ವಿಷಯ** : ಪ್ರವಾಸೋದ್ಯಮ ಅಭಿವೃದ್ಧಿ
**ಉತ್ತರಿಸುವ ದಿನಾಂಕ** : 15/02/2019
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ ಹಾಗೂ ರೇಷ್ಮೆ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯಲ್ಲಿ ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಿ ಪ್ರವಾಸಿಗರನ್ನು ಆಕರ್ಷಿಸಲು ಸರ್ಕಾರ ಹಮ್ಮಿಕೊಂಡಿರುವ ಯೋಜನೆಗಳಾವುವು; | ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸಿಗರ ಅನುಕೂಲಕ್ಕಾಗಿ ಯಾತ್ರಿನಿವಾಸ, ಡಾರ್ಮಿಟರಿ, ಶೌಚಾಲಯ, ರೈಲಿಂಗ್ಸ್, ಪಾತ್‌ವೇ, ಆಸನಗಳ ವ್ಯವಸ್ಥೆ, ಪ್ರವಾಸಿ ತಾಣಗಳನ್ನು ಸಂಪರ್ಕಿಸುವ ಕೂಡುರಸ್ತೆ ಅಭಿವೃದ್ಧಿ, ಪ್ರವಾಸಿ ಮೂಲಸೌಲಭ್ಯಗಳ ಅಭಿವೃದ್ಧಿ ಮುಂತಾದ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ ಹಾಗೂ ಪ್ರವಾಸಿಗರನ್ನು ಆಕರ್ಷಿಸಲು ಕಿತ್ತೂರು ಉತ್ಸವ ಆಚರಿಸಲಾಗುತ್ತಿದೆ. ಯೋಜನೆಗಳ ವಿವರಗಳನ್ನು ಅನುಬಂದದಲ್ಲಿ ನೀಡಲಾಗಿದೆ. |
| ಆ) | ಈ ಯೋಜನೆಗಳಿಗೆ ಸರ್ಕಾರ ನಿಗಧಿಪಡಿಸಿರುವ ಅನುದಾನವೆಷ್ಟು; ಈ ಅನುದಾನದಲ್ಲಿ ಕೇಂದ್ರ ಸರ್ಕಾರದ ಪಾಲೆಷ್ಟು? | ರಾಜ್ಯ ಸರ್ಕಾರದ ಅನುದಾನದಡಿ ಪ್ರವಾಸೋದ್ಯಮ ಇಲಾಖೆ ವತಿಯಿಂದ 2017-18 ಹಾಗೂ 2018-19ನೇ ಸಾಲಿನಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಕೈಗೊಂಡಿರುವ ಕಾಮಗಾರಿಗಳ ವಿವರವನ್ನು ಅನುಬಂಧದಲ್ಲಿ ಒದಗಿಸಿದೆ. ಇದರಲ್ಲಿ ಕೇಂದ್ರ ಸರ್ಕಾರದ ಪಾಲು ಇರುವುದಿಲ್ಲ. |

ಪ್ರಇ 25 ಪ್ರವಾವಿ 2019

14/2/19
(ಸಾ.ರಾ.ಮಹೇಶ್)
ಪ್ರವಾಸೋದ್ಯಮ ಮತ್ತು ರೇಷ್ಮೆ ಸಚಿವರು

## ಅನುಬಂಧ

## (ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 1092)

## 2017-18 ಹಾಗೂ 2018-19 ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಕೈಗೊಂಡಿರುವ ಅಭಿವೃದ್ಧಿ ಕಾಮಗಾರಿಗಳಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರ

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾಮಗಾರಿಗಳ ವಿವರ | ಅಂದಾಜು ಮೊತ್ತ | 2017-18ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ | 2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| | **ಬೆಳಗಾವಿ ಜಿಲ್ಲೆ** | | | |
| | **ಬೆಳಗಾವಿ ತಾಲ್ಲೂಕು** | | | |
| 1 | ಬೆಳಗಾವಿ ತಾಲ್ಲೂಕಿನ ಹಿರೇಬಾಗೇವಾಡಿ ಗ್ರಾಮದ ಶ್ರೀ ಫಡಿಬಸವೇಶ್ವರ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| 2 | ಬೆಳಗಾವಿ ತಾಲ್ಲೂಕಿನ ಮಾರಿಹಾಳ ಗ್ರಾಮದ ಕೋಡಿ ಬಸವೇಶ್ವರ ದೇವಸ್ಥಾನದ ಹತ್ತಿರ ಯಾತ್ರಿನಿವಾಸಕ್ಕೆ ಮೂಲಸೌಕರ್ಯಗಳ ನಿರ್ಮಾಣ | 25.00 | 10.00 | - |
| 3 | ಬೆಳಗಾವಿ ಗ್ರಾಮೀಣ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಮಾರಿಹಾಳ ಗ್ರಾಮದ ಪುರಾತನವಾದ ಮಹಬೂಬ ಸುಬಾನಿ ದರ್ಗಾ ಹಾಗೂ ಈದಗಾ ಇಲ್ಲಿ ಯಾತ್ರಿನಿವಾಸ ಹಾಗೂ ಮೂಲಭೂತ ಸೌಕರ್ಯಗಳ ಅಬಿವೃದ್ಧಿ. | 50.00 | 20.00 | - |
| 4 | ಬೆಳಗಾವಿ ಜಿಲ್ಲೆಯ ಹಡಿಗನಾಳ ಗ್ರಾಮದ ಶ್ರೀ ಮುತ್ತೇಶ್ವರ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | |
| 5 | ಬೆಳಗಾವಿ ಜಿಲ್ಲೆಯ ಕಿತ್ತೂರು ಮತಕ್ಷೇತ್ರದ ತಿಗಡಿ ಗ್ರಾಮದ ಹೊಳೆದಂಡೆಯ ಶ್ರೀ ಬಸವೇಶ್ವರ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | |
| | **ರಾಮದುರ್ಗ ತಾಲ್ಲೂಕು** | | | |
| 6 | ರಾಮದುರ್ಗ ತಾಲ್ಲೂಕಿನ ಹಳೇ ತೋರಗಲ್ ಗ್ರಾಮದ ಮೇಗುಂಡೇಶ್ವರ ದೇವಸ್ಥಾನದ ಬಳಿ ಯಾತ್ರಿನಿವಾಸ | 25.00 | 10.00 | - |
| 7 | ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಸುರೇಬಾನ ಗ್ರಾಮದ ಶ್ರೀ ಶಬರೀ ದೇವಿ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ. | 25.00 | 10.00 | |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾಮಗಾರಿಗಳ ವಿವರ | ಅಂದಾಜು ಮೊತ್ತ | 2017-18ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ | 2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 8 | ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಕೊಳಚೆವೇರ್ ಪ್ರದೇಶದಲ್ಲಿ ಮಲಪ್ರಭಾ ನದಿಗೆ ಅಡ್ಡಲಾಗಿ ತೂಗು ಸೇತುವೆ ನಿರ್ಮಾಣ. | 100.00 | 20.00 | |
| | **ರಾಯಭಾಗ ತಾಲ್ಲೂಕು** | | | |
| 9 | ರಾಯಭಾಗ ತಾಲ್ಲೂಕಿನ ಕುಡಚಿ ಮತಕ್ಷೇತ್ರದ ಶ್ರೀ ರಾಘವೇಂದ್ರ ಮಠದ ಬಳಿ (ಹಾರೂಗೇರಿ) ಮೂಲಭೂತ ಸೌಕರ್ಯ ಒದಗಿಸುವ ಬಗ್ಗೆ. | 25.00 | 10.00 | - |
| | **ಅಥಣಿ ತಾಲ್ಲೂಕು** | | | |
| 10 | ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಐನಾಪೂರ ಪಟ್ಟಣದ ಕುರುಬ ಸಮಾಜದ ಆರಾಧ್ಯ ದೇವರಾ ಹಾಗೂ ಗ್ರಾಮದ ದೇವರಾದ ಶ್ರೀ ಸಿದ್ಧೇಶ್ವರ ದೇವಸ್ಥಾನದ ಬಳಿ ಖಾಲಿ ಜಮೀನಿದ್ದು, ಅಲ್ಲಿ ಒಂದು ಯತ್ರಿನಿವಾಸ ನಿರ್ಮಾಣ ಮಾಡುವ ಬಗ್ಗೆ. | 50.00 | 20.00 | - |
| 11 | ಅಥಣಿ ತಾಲ್ಲೂಕಿನ ಚಮಕೇರಿ ಗ್ರಾಮದ ಶ್ರೀ ಗುರು ಚಕ್ರವರ್ತಿ ಸದಾಶಿವ ಶಿವಯೋಗಿಗಳ ಮಠದ ಬಳಿ ಯಾತ್ರಿನಿವಾಸ ನಿರ್ಮಾಣ. | 50.00 | 20.00 | - |
| 12 | ಅಥಣಿ ತಾಲ್ಲೂಕಿನ ಕೊಕಟನೂರ ಗ್ರಾಮದ ಶ್ರೀ ಯಲ್ಲಮ್ಮದೇವಿ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| 13 | ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಮುರಗುಂಡಿ ಗ್ರಾಮದ ಶ್ರೀ ಮುರಸಿದ್ಧೇಶ್ವರ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ. | 25.00 | 10.00 | |
| | **ಗೋಕಾಕ್ ತಾಲ್ಲೂಕು** | | | |
| 14 | ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನ ಗೋಸಬಾಳ ಗ್ರಾಮದ ಶ್ರೀ ಮಾರುತಿ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 50.00 | 12.00 | |
| | **ಚಿಕ್ಕೋಡಿ ತಾಲ್ಲೂಕು** | | | |
| 15 | ಚಿಕ್ಕೋಡಿ ತಾಲ್ಲೂಕಿನ ಆಡಿ ಗ್ರಾಮದ ಶ್ರೀ ಮಲ್ಲಿಕಾರ್ಜುನ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| 16 | ಚಿಕ್ಕೋಡಿ ತಾಲ್ಲೂಕಿನ ನಾಗರಾಳ ಗ್ರಾಮದ ಶ್ರೀ ಮುರುಗುಬಾಯಿ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| 17 | ಚಿಕ್ಕೋಡಿ ತಾಲ್ಲೂಕಿನ ಚಿಕ್ಕಲವಾಳ ಗ್ರಾಮದ ಶ್ರೀ ಮಹಾದೇವ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾಮಗಾರಿಗಳ ವಿವರ | ಅಂದಾಜು ಮೊತ್ತ | 2017-18ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ | 2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 18 | ಚಿಕ್ಕೋಡಿ ತಾಲ್ಲೂಕಿನ ಕೇರೂರು ಗ್ರಾಮದ ಶ್ರೀ ಬಸವೇಶ್ವವರ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| 19 | ಚಿಕ್ಕೋಡಿ ತಾಲ್ಲೂಕಿನ ಶಮನೇವಾಡಿ ಗ್ರಾಮದ ಶ್ರೀ ಚಂದ್ರಪ್ರಭು ದಿಗಂಬರ್ ಜೈನ್ ಮಂದಿರಕ್ಕೆ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| 20 | ಚಿಕ್ಕೋಡಿ ತಾಲ್ಲೂಕಿನ ಇಂಗಳಿ ಗ್ರಾಮದ ಶ್ರೀ ಅಂಬಾಬಾಯಿ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 50.00 | 20.00 | - |
| 21 | ಚಿಕ್ಕೋಡಿ ತಾಲ್ಲೂಕಿನ ಚಿಕ್ಕೋಡಿ ಪಟ್ಟಣದ ಶ್ರೀ ದತ್ತ ದೇವಸ್ಥಾನ ಕಮಿಟಿ ಟ್ರಸ್ಟ್ ಇಲ್ಲಿ ಯಾತ್ರಿನಿವಾಸ ನಿರ್ಮಾಣ. | 50.00 | 20.00 | - |
| 22 | ಚಿಕ್ಕೋಡಿ ತಾಲ್ಲೂಕಿನ ಕಲ್ಲೋಳ ಗ್ರಾಮದ ಶ್ರೀ ವಿಠಲ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| 23 | ಚಿಕ್ಕೋಡಿ ತಾಲ್ಲೂಕಿನ ವಡ್ರಾಳ ಗ್ರಾಮದ ಶ್ರೀ ಯಲ್ಲಾಲಿಂಗೇಶ್ವರ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| 24 | ಚಿಕ್ಕೋಡಿ ತಾಲ್ಲೂಕಿನ ನಾಗರಮುನ್ನೋಳ್ಳಿ ಗ್ರಾಮದ ಶ್ರೀ ಸಿದ್ದೇಶ್ವರ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| | **ಗೋಕಾಕ ತಾಲ್ಲೂಕು** | | | |
| 25 | ಗೋಕಾಕ್ ನಗರದ ರವಿವಾರ ಪೇಠ ರಾಮದೇವಗಲ್ಲಿಯ ಶ್ರೀ ರಾಮ ಮಂದಿರ ಹತ್ತಿರ ಯಾತ್ರಿನಿವಾಸ ನಿರ್ಮಾಣ | 25.00 | 10.00 | - |
| | **ಬೈಲಹೊಂಗಲ ತಾಲ್ಲೂಕು** | | | |
| 26 | ಬೈಲಹೊಂಗಲ ತಾಲ್ಲೂಕಿನ ಎಂ.ಕೆ.ಹುಬ್ಬಳ್ಳಿಯ ಶ್ರೀ ಕ್ಷೇತ್ರ ಹೊಸ ಶ್ರೀ ವಿಠಲ ರುಕ್ಮಾಯಿ ಮಂದಿರದ ಆವರಣದಲ್ಲಿ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |
| | **ಖಾನಾಪುರ ತಾಲ್ಲೂಕು** | | | |
| 27 | ಖಾನಾಪುರ ತಾಲ್ಲೂಕಿನ ಕಸಮಳಗಿ ಗ್ರಾಮದಲ್ಲಿನ ಜೈನ ಬಸದಿಯ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 25.00 | 10.00 | - |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾಮಗಾರಿಗಳ ವಿವರ | ಅಂದಾಜು ಮೊತ್ತ | 2017-18ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ | 2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| | **ನಿಪ್ಪಾಣಿ ತಾಲ್ಲೂಕು** | | | |
| 28 | ರಾಸಾಯಿ ಶೆಂಡೂರು ಗ್ರಾಮದ ಶ್ರೀ ಮಹಾಕಾಳಿ ಮಹಾಸಂಸ್ಥಾನ ಓಂ ಶಕ್ತಿದೇವಸ್ಥಾನ ಇಲ್ಲಿ ಯಾತ್ರಿ ನಿವಾಸ ನಿರ್ಮಾಣ | 25.00 | 10.00 | - |
| 29 | ಅಪ್ಪಾಜಿವಾಡಿ ಗ್ರಾಮದ ಶ್ರೀ ಹಾಲಸಿದ್ದೇಶ್ವರ ದೇವಸ್ಥಾನದ ಬಳಿ ಯಾತ್ರಿನಿವಾಸ | 25.00 | 10.00 | - |
| | **ಒಟ್ಟು** | **950.00** | **352.00** | **0.00** |
| | **2018-19 ನೇ ಸಾಲಿನಲ್ಲಿ ಮಂಜೂರಾಗಿರುವ ಕಾಮಗಾರಿಗಳು** | | | |
| 30 | ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ದಡ್ಡಿ ಗ್ರಾಮದ ಶ್ರೀ ರಾಮಲಿಂಗೇಶ್ವರ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ. | 50.00 | - | 25.00 |
| 31 | ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಹರಗಾಪೂರ ಗ್ರಾಮದ ಶ್ರೀ ದುರದುಂಡೇಶ್ವರ ಮಠದ ಆವರಣದಲ್ಲಿ ಸಾರ್ವಜನಿಕ ಶೌಚಾಲಯ ನಿರ್ಮಾಣ | 25.00 | - | 25.00 |
| 32 | ಬೆಳಗಾವಿ ಜಿಲ್ಲೆಯ ಬೆಳವಡಿಯಲ್ಲಿ ಪ್ರವಾಸಿ ಮೂಲಸೌಲಭ್ಯಗಳ ಅಭಿವೃದ್ಧಿ | 50.00 | - | 50.00 |
| 33 | ಬೆಳಗಾವಿ ಜಿಲ್ಲೆ, ಬೈಲಹೊಂಗಲ ತಾಲ್ಲೂಕಿನ ದೇವಲಾಪೂರ ಗ್ರಾಮ ವಿಸ್ತರಣೆ ಪ್ರದೇಶದ ಕುಭೂಷಣ ನಗರದಲ್ಲಿ ಭಗವಾನ 1008 ನೇಮಿನಾಥ ತೀರ್ಥಂಕರರ ದಿಗಂಬರ ಜೈನ ಬಸ್ತಿಯ ಹತ್ತಿರ ಶೌಚಾಲಯ ಹಾಗೂ ಇತರೆ ಮೂಲಸೌಲಭ್ಯ ನಿರ್ಮಾಣ | 50.00 | - | 25.00 |
| 34 | ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಶ್ರೀಕ್ಷೇತ್ರ ಯಲ್ಲಮ್ಮ ಗುಡ್ಡದಲ್ಲಿ ಡಾರ್ಮಿಟ್ರಿ ಸಮುದಾಯ ಶೌಚಾಲಯ ಹಾಗೂ ಸ್ನಾನಗೃಹಗಳು ಹಾಗೂ ಲಗೇಜ್ ಕೊಠಡಿ ನಿರ್ಮಾಣ | 500.00 | - | 250.00 |
| 35 | ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಶ್ರೀಕ್ಷೇತ್ರ ಯಲ್ಲಮ್ಮ ಗುಡ್ಡದಲ್ಲಿ ತಂಗುದಾಣ ಹಾಗೂ ಕುಡಿಯುವ ನೀರಿನ ಆರ್.ಓ. ಪ್ಲಾಂಟ್ ನಿರ್ಮಾಣ | 60.00 | - | 60.00 |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾಮಗಾರಿಗಳ ವಿವರ | ಅಂದಾಜು ಮೊತ್ತ | 2017-18ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ | 2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 36 | ರಾಯಭಾಗ ತಾಲ್ಲೂಕಿನ ಸಿದ್ದಾಪೂರ ಗ್ರಾಮ ಶ್ರೀ ಕಾಡಸಿದ್ದೇಶ್ವರ ದೇವಾಲಯದ ಬಳಿ ಮೂಲಸೌಲಭ್ಯ | 25.00 | - | 25.00 |
| 37 | ರಾಯಬಾಗ ತಾಲ್ಲೂಕಿನ ಸವದತ್ತಿ ಗ್ರಾಮದ ಶ್ರೀ ಮಹಾಂತ ಮಹಾರಾಜರ ದೇವಸ್ಥಾನಕ್ಕೆ ಮೂಲ ಸೌಕರ್ಯ, ರಸ್ತೆ ಮತ್ತು ಗಟಾರ್ ನಿರ್ಮಾಣ ಹಾಗೂ ಇತರೆ ಅಭಿವೃದ್ಧಿ ಕಾಮಗಾರಿಗಳು | 25.00 | - | 25.00 |
| 39 | ಬೆಳಗಾವಿ ತಾಲ್ಲೂಕು, ಸುತಗಟ್ಟಿ ಗ್ರಾಮದ ಶ್ರೀ ದುರ್ಗಾದೇವಿ ದೇವಸ್ಥಾನದ ಬಳಿ ಯಾತ್ರಿನಿವಾಸ ನಿರ್ಮಾಣ. | 50.00 | - | 25.00 |
| 40 | ಬೆಳಗಾವಿ ಗ್ರಾಮಾಂತರ ತಾಲ್ಲೂಕಿನ ಮಣ್ಣೂರ ಗ್ರಾಮದ ಗುಡ್ಡಾದೇವಿ ಮಂದಿರದ ಹತ್ತಿರ ಯಾತ್ರಿನಿವಾಸ ನಿರ್ಮಾಣ. | 50.00 | - | 25.00 |
| 41 | ಖಾನಾಪುರ ತಾಲ್ಲೂಕಿನ ಹೆಬ್ಬಾನಹಟ್ಟಿ ಗ್ರಾಮದಿಂದ ಸ್ವಯಂ ಭೂ ಶ್ರೀ ಮಾರುತಿ ದೇವಸ್ಥಾನದವರೆಗೆ ಮಾರ್ಗ 2 ಬೈಲುರು ಗ್ರಾಮದಿಂದ ಸ್ವಯಂ ಭೂ ಮಾರುತಿ ದೇವಸ್ಥಾನದ ಆವರಣದಲ್ಲಿ ಫೇವರ್ಸ್ ಹಾಗೂ ಶೌಚಾಲಯ ನಿರ್ಮಾಣ | 25.00 | - | 25.00 |
| 42 | ಖಾನಾಪುರ ತಾಲ್ಲೂಕಿನ ಕಣಕುಂಬಿ ಗ್ರಾಮದ ಮಾವೂಲಿ ದೇವಸ್ಥಾನದ ಆವರಣದಲ್ಲಿ ಫೇವರ್ಸ್ ಹಾಗೂ ಶೌಚಾಲಯ ನಿರ್ಮಾಣ | 25.00 | - | 25.00 |
| 43 | ಚಿಕ್ಕೋಡಿ ತಾಲ್ಲೂಕಿನ ಜೋಡಕುರಳಿ ಗ್ರಾಮದಲ್ಲಿರುವ ಸಿದ್ದಾರೂಢ ಮಠದ ಹತ್ತಿರ ಯಾತ್ರಿನಿವಾಸ ನಿರ್ಮಾಣ | 100.00 | - | 50.00 |
| 44 | ಚಿಕ್ಕೋಡಿ ತಾಲ್ಲೂಕಿನ ಕಾಡಾಪೂರ ಗ್ರಾಮದಲ್ಲಿರುವ ಅರಣ್ಯಸಿದ್ದೇಶ್ವರ ದೇವಸ್ಥಾನದ ಹತ್ತಿರ ಯಾತ್ರಿನಿವಾಸ ನಿರ್ಮಾಣ | 100.00 | - | 50.00 |
| 45 | ಬೆಳಗಾವಿ ಜಿಲ್ಲೆಯ ಗೋಕಾಕ್ ಫಾಲ್ಸ್‌ನ ಯಾತ್ರಾ ಸ್ಥಳದಲ್ಲಿ ಶುದ್ಧ ಕುಡಿಯುವ ನೀರಿನ ಘಟಕ ಹಾಗೂ ಪ್ರತ್ಯೇಕ ಶೌಚಾಲಯಗಳ ನಿರ್ಮಾಣ | 30.00 | - | 30.00 |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾಮಗಾರಿಗಳ ವಿವರ | ಅಂದಾಜು ಮೊತ್ತ | 2017-18ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ | 2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 46 | ಸವದತ್ತಿ ತಾಲ್ಲೂಕಿನ ಶ್ರೀಕ್ಷೇತ್ರ ಯಲ್ಲಮ್ಮ ದೇವಸ್ಥಾನದ ಬಳಿ ತಂಗುದಾಣ, ಅಡುಗೆ ಮನೆ ಹಾಗೂ ಗದ್ದಿಗೆ ಒಳಗೊಂಡಂತೆ 20 ಜನ ಉಳಿಯುವ 40 ಕೊಠಡಿಗಳ ನಿರ್ಮಾಣ. | 800.00 | - | 400.00 |
| 47 | ಸವದತ್ತಿ ತಾಲ್ಲೂಕಿನ ಶ್ರೀಕ್ಷೇತ್ರ ಯಲ್ಲಮ್ಮ ದೇವಸ್ಥಾನದ ಜೋಗಳಬಾವಿಯ ಸಮೀಪ ವಾಹನ ನಿಲ್ದಾಣ ಹಾಗೂ ಮೂಲಸೌಕರ್ಯ ಅಭಿವೃದ್ದಿ. | 50.00 | - | 50.00 |
| 48 | ಸವದತ್ತಿಯಲ್ಲಿರುವ ಸಿದ್ದನಕೊಳ್ಳಕ್ಕೆ ತಡೆಗೋಡೆ ನಿರ್ಮಿಸಿ ನೀರು ಸಂಗ್ರಹಣೆ ಮಾಡಿ ಗಿಡಮರಗಳಿಗೆ ನೀರು ಪೂರೈಸುವುದು. | 75.00 | - | 75.00 |
| 49 | ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಶ್ರೀಕ್ಷೇತ್ರ ಯಲ್ಲಮ್ಮ ಗುಡ್ಡದಲ್ಲಿ ಸುಮಾರು 150 ನಾಲ್ಕು ಚಕ್ರಗಳ ವಾಹನಗಳು ಹಾಗೂ 500 ದ್ವಿಚಕ್ರ ವಾಹನಗಳಿಗೆ ಪಾರ್ಕಿಂಗ್ ಸೌಲಭ್ಯ | 200.00 | - | 100.00 |
| 50 | ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಶ್ರೀಕ್ಷೇತ್ರ ಯಲ್ಲಮ್ಮ ಗುಡ್ಡದಲ್ಲಿ 10 ಜನ ತಂಗುವ 20 ಕೊಠಡಿಗಳ ನಿರ್ಮಾಣ (ಎರಡು ಬ್ಲಾಕ್ ತಲಾ-ರೂ.300.00 ಲಕ್ಷಗಳು). | 600.00 | - | 300.00 |
| 51 | ಬೈಲಹೊಂಗಲದ ಕಿತ್ತೂರು ರಾಣಿ ಚೆನ್ನಮ್ಮ ರವರ ಸ್ಮಾರಕದ ಬಳಿ ನಿರ್ಮಿಸಿರುವ ಟೂಂಬ್‌ಗಳಿಗೆ ಕಲ್ಲು ಹೊದಿಕೆ ಕಾಮಗಾರಿ. | 60.00 | - | 60.00 |
| 52 | ಬೆಳಗಾವಿ ನಗರದಲ್ಲಿರುವ ಪ್ರವಾಸೋದ್ಯಮ ಇಲಾಖೆಯ 2 ಎಕರೆ ಜಮೀನಿನಲ್ಲಿ ಪ್ರವಾಸಿ ಭವನ ನಿರ್ಮಾಣ. | 200.00 | - | 100.00 |
| 53 | ಬೆಳಗಾವಿ ಜಿಲ್ಲೆ ಕಿತ್ತೂರು ಉತ್ಸವಕ್ಕೆ ಬಿಡುಗಡೆ ಮಾಡಿರುವ ಅನುದಾನ | 20.00 | - | 20.00 |
| | ಒಟ್ಟು | 3170.00 | 0.00 | 1820.00 |
| | **ಗ್ರ್ಯಾಂಡ್ ಟೋಟಲ್** | **4120.00** | **352.00** | **1820.00** |



**ಕರ್ನಾಟಕ ಸರ್ಕಾರ**

ಸಂಖ್ಯೆ:ಪ್ರಇ 17 ಪ್ರವಾವಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ
ಬೆಂಗಳೂರು ದಿನಾಂಕ: 21 .02.2018

Starred
15/02/19

ಇವರಿಂದ,

ಸರ್ಕಾರದ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ
ವಿಕಾಸ ಸೌಧ, ಬೆಂಗಳೂರು.

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿದಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ [illegible] ರವರು ಮಂಡಿಸಿರುವ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 425 ಕ್ಕೆ ಉತ್ತರ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 425 ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

[ಬಿ.ಎನ್.ಯತಿರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

